

# ಸಿದ್ಧಗಂಗಾ

ಜನವರಿ ೧೯೯೮








ಶ್ರೀ ಉದ್ದಾನ ಶಿವಯೋಗಿಗಳು

- ಶ್ರೀವಾಣಿ
- ಶರಣರು ಮತ್ತು ದಲಿತ ಪ್ರಜ್ಞೆ
- ಜನಪದ ಸಾಹಿತ್ಯದಲ್ಲಿ ಜೀವನ, ಸಂಸ್ಕೃತಿ
- ಗ್ರಾಮೀಣ ಪ್ರದೇಶದಲ್ಲಿ ಸಂಕ್ರಾಂತಿ
- ಅಕ್ಕಮಹಾದೇವಿ ವಚನಗಳಲ್ಲಿ ಪರಿಸರದ ಚಿತ್ರಣ



ಕಾಯಕವೇ ಕೈಲಾಸ

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೪ ಜನವರಿ ೧೯೯೮ ಸಂಚಿಕೆ : ೧

**ಮುಖಪುಟ**

ಶ್ರೀ ಉದ್ದಾನ ಶಿವಯೋಗಿಗಳು
ತುಮಕೂರಿನಲ್ಲಿ ಇತ್ತೀಚೆಗೆ ನಡೆದ ರಾಜ್ಯಮಟ್ಟದ ಉಪಹಾರ ಮಂದಿರಗಳ ಸಂಘದ ಸಮಾರೋಪ ಸಮಾರಂಭದಲ್ಲಿ ಶ್ರೀ ಶ್ರೀಗಳು


**ಸಂಪಾದಕ ಮಂಡಳಿ**

**ಪ್ರಧಾನ ಸಂಪಾದಕರು**
ಚನ್ನಪ್ಪ ಎರೇಸೀಮೆ

**ಸಂಪಾದಕರು**
ಹೆಚ್.ವಿ. ವೀರಭದ್ರಯ್ಯ

**ಸಹ ಸಂಪಾದಕರು**
ಎಚ್.ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

**ಸಲಹಾ ಸಮಿತಿ**
ಡಾ. ಎಂ.ಎನ್. ಚನ್ನಬಸಪ್ಪ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಎಚ್.ಎಸ್. ನರಸಿಂಹ ಜೀಯರ್
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಕೆ.ಎಸ್. ಶಂಕರಯ್ಯ
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

**ಪ್ರಕಾಶಕರು**
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104


**ಹಿಂಬದಿ ಪುಟ**
ವರ್ಣರಂಜಿತ ಕ್ಯಾಲೆಂಡರ್


**ಮುದ್ರಕರು :**
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೮೦೮೭


## ಒಳಪುಟಗಳಲ್ಲಿ ......




| **ವಿಳಾಸ :** | **ಚಂದಾ ವಿವರ :** |
|---|---|
| "ಸಂಪಾದಕರು", | ವಾರ್ಷಿಕ ಚಂದಾ ರೂ. ೫೦ |
| 'ಸಿದ್ಧಗಂಗಾ' ಮಾಸಪತ್ರಿಕೆ, | ಆಜೀವ ಸದಸ್ಯತ್ವ ರೂ. ೫೦೦ |
| ಶ್ರೀ ಸಿದ್ಧಗಂಗಾ ಮಠ, | ಬಿಡಿ ಪ್ರತಿ ರೂ. ೫ |
| ತುಮಕೂರು ಜಿಲ್ಲೆ-೫೭೨ ೧೦೪ | |


**ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಮೊದಲಾದ ಲೇಖನಗಳಿಗೆ ಸ್ವಾಗತವಿದೆ.**

## ಸಂಪಾದಕೀಯ....

ಶ್ರೀ ಮಠದ ಇತಿಹಾಸಕ್ಕೆ ಸುವರ್ಣಾಕ್ಷರಗಳ ಪವಿತ್ರ ಪುಟಗಳನ್ನು ಜೋಡಿಸಿದ ವರ್ಷ ೧೯೯೭. ಶ್ರೀ ಸಿದ್ಧಗಂಗಾ ಗುರು ಪರಂಪರೆಯಲ್ಲಿ ಅರಳಿದ ಪರಮಪೂಜ್ಯ ಡಾ। ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ವಿರಕ್ತಾಶ್ರಮ ಸ್ವೀಕರಿಸಿ ಅರವತ್ತಾರು ವರ್ಷಗಳ ದೀರ್ಘ ತಪಸ್ಸಿನ ಸೇವಾ ಮಣಿಹಕ್ಕೆ ಭಕ್ತಿ ಕಿರೀಟವನ್ನು ಮುಡಿಸಿದ 'ವಜ್ರ ಮಹೋತ್ಸವ' ಅಭೂತಪೂರ್ವವಾಗಿ ಮಾರ್ಚಿ ೨೨, ೨೩ ಮತ್ತು ೨೪ರಂದು ನಡೆಯಿತು. ನಾಡಿನ, ಹೊರನಾಡಿನ ಭಕ್ತಕೋಟಿ ಶ್ರೀಮಠದಲ್ಲಿ ಸಮಾವೇಶಗೊಂಡು ಜನಶಕ್ತಿಯ ಕ್ರಿಯಾಮುಖದ ಪರಿಚಯವನ್ನು ಮಾಡಿಕೊಟ್ಟಿತು. ಜನಶಕ್ತಿ ಚಾಲನವಾದರೆ ಎಂತಹ ಅದ್ಭುತಗಳನ್ನು, ಪವಾಡಗಳನ್ನು ಸಾಧಿಸಬಹುದೆಂಬುದನ್ನು ತೋರಿಸಿತು.

ರಾಷ್ಟ್ರ ಜೀವನದಲ್ಲಿ ತ್ವರಿತಗತಿಯ ಏಳು-ಬೀಳುಗಳನ್ನು ಕಂಡ ೧೯೯೭ ಪ್ರಜಾಪ್ರಭುತ್ವದಲ್ಲಿ ಸಂಯುಕ್ತ ರಂಗ ಸರ್ಕಾರವನ್ನು ತಂದು ಕೊಟ್ಟಿತು. ಅದೂ ಅಲ್ಪಾಯುವಾಗಿ ಬಿದ್ದು ಹೋಯಿತು. ಜನನಾಯಕರ ಸ್ಪರ್ಧಾ, ಸಂಕುಚಿತ ಭಾವನೆಗಳಿಗೆ ಸಾಕ್ಷಿಗಲ್ಲಾಗಿ ಉಳಿಯಿತು. ಲೋಕಸಭೆಗೆ ಚುನಾವಣೆ ಘೋಷಿತವಾಗುವಂತಾಯಿತು. ರಾಜ್ಯ ಜೀವನದಲ್ಲಿಯೂ ವ್ಯತ್ಯಾಸಗಳು ಕಾಣಬಂದವು. ಕಾಲಚಕ್ರ ಉರುಳುತ್ತಲೇ ಇದೆ.

ಶ್ರೀಮಠದ ವಿದ್ಯಾರ್ಥಿಗಳಾಗಿ ಶಿವಯೋಗ ಸಾಮ್ರಾಜ್ಯದ ಮೃದು ಮಂದಾರವಾಗಿ, ಮುಗ್ಧತೆಯ ಪ್ರತೀಕವೆನಿಸಿ, ಹಸು ಮಗುವಿನ ಸ್ವಭಾವದವರಾಗಿದ್ದ ಕಂಚುಗಲ್ ಬಂಡೇ ಮಠದ ಪರಮಪೂಜ್ಯ ಶ್ರೀ ಶಿವರುದ್ರ ಮಹಾಸ್ವಾಮಿಗಳವರು ಲಿಂಗೈಕ್ಯರಾದರು. ಅಂತೆಯೇ ಬೆಂಗಳೂರಿನ ಸುಂಕೇನಹಳ್ಳಿ ಜಂಗಮ ಮಠದ ಪರಮಪೂಜ್ಯರಾಗಿದ್ದ ಶ್ರೀ ನಿಜಗುಣ ಸ್ವಾಮಿಗಳೂ ಲಿಂಗೈಕ್ಯರಾದರು. ಶ್ರೀ ಸಿದ್ಧಗಂಗಾಮಠದ ಹೆಮ್ಮೆಯ ಹಳೆಯ ವಿದ್ಯಾರ್ಥಿಗಳಾಗಿದ್ದ ಉದಾರಿ, ಕೊಡುಗೈ ದೊರೆ ಪದ್ಮಶ್ರೀ ಆರ್.ಎಂ.ಬಿ. ಆರಾಧ್ಯರು ಲಿಂಗದೊಳಗಾದರು. ಶ್ರೀಮಠಕ್ಕೆ ಹಾಗೂ ಸಮಾಜಕ್ಕೆ ಇದರಿಂದಾಗಿ ತುಂಬಲಾರದ ನಷ್ಟವಾಯಿತು.

ಕನಕಪುರದ ದೇಗುಲಮಠಕ್ಕೆ ಮುಂಬರುವ ಮಾರ್ಚಿ ೨೩ರಂದು ಉತ್ತರಾಧಿಕಾರಿಗಳ ಪಟ್ಟಾಭಿಷೇಕಕ್ಕೆ ಸಿದ್ಧತೆಗಳು ಆರಂಭವಾಗಿದೆ. ಬೃಹತ್ ಸ್ಮರಣ ಸಂಪುಟದ ಪ್ರಕಟಣೆಯನ್ನು ಸಂಯೋಜಿಸಲಾಗಿದೆ. ಉತ್ತರಾಧಿಕಾರಿಗಳಾಗಿ ತುಮಕೂರು ತಾಲ್ಲೂಕು ಕೆಂಬಳಿಲಿನ ಹೊಂಬಾಳೆ ದೇಗುಲ ಮಠಕ್ಕೆ ನಂದಾದೀಪವಾಗಿ ಸ್ತಂಭವೇರಲಿದೆ ವಿದ್ಯಾ ವಿನಯ ಸಂಪನ್ನಮೂರ್ತಿ ಶ್ರೀ ರೇಣುಕೇಶ್ ಕನ್ನಡ ಎಂ.ಎ. ಪದವೀಧರರಾಗಿದ್ದಾರೆ. ಸಂಸ್ಕೃತ್ ವಿದ್ವತ್ ಪರೀಕ್ಷೆಗೆ ಅಣಿಯಾಗುತ್ತಿದ್ದಾರೆ. ಶ್ರೀ ಸಿದ್ಧಗಂಗಾಮಠದ ಪರಮಪೂಜ್ಯ ಶ್ರೀ ಶ್ರೀಗಳವರ ಕಾಯಕ-ದಾಸೋಹಗಳ ಸೇವಾ ಕಮ್ಮಟದಲ್ಲಿ ರೂಪಿತವಾಗುತ್ತಿದ್ದಾರೆ. ದೇಗುಲಮಠದ ಗುರು ಪರಂಪರೆಯ ಪವಿತ್ರ ಚರಿತ್ರೆಯ ದೀಪಧಾರಿಯಾಗಲಿದ್ದಾರೆ. ಪೂಜ್ಯ ಮುಮ್ಮಡಿ ನಿರ್ವಾಣ ಸ್ವಾಮಿಗಳವರ ಕಣ್ಬೆಳಕಿನಲ್ಲಿ ಮುಂದುವರಿಯಲಿದ್ದಾರೆ.

**ಆತ್ಮೀಯರೆ,**

'ಸಿದ್ಧಗಂಗಾ' ಬೆಳೆದು ಬರಲು ತಾವೆಲ್ಲ ಸಹಕರಿಸಿದ್ದೀರಿ, ವಂದನೆಗಳು. ಈ ಸಂಚಿಕೆಯಿಂದ ಪತ್ರಿಕೆ ಆಕಾರ, ವಿನ್ಯಾಸ ಹಾಗೂ ಆಕರ್ಷಕ ಮುದ್ರಣದಲ್ಲಿ ವಿಶಿಷ್ಟವಾಗಿ ನಿಮ್ಮ ಕೈ ಸೇರುತ್ತಿದೆ. ಪರಮಪೂಜ್ಯ ಶ್ರೀಶ್ರೀಗಳವರ ಆದೇಶ, ಹಳೆ ವಿದ್ಯಾರ್ಥಿ ಸಂಘದ ಅನುಮತಿಯ ಮೇರೆಗೆ ಪತ್ರಿಕೆ ೧೯೯೮ರಿಂದ ಹೊಸ ರೂಪದಲ್ಲಿ ಹೆಜ್ಜೆಯಿಡುತ್ತಿದೆ. ನಿಮ್ಮೆಲ್ಲರ ಪ್ರೋತ್ಸಾಹವನ್ನು ಕೋರುತ್ತದೆ.

ಪತ್ರಿಕೆಯ ಬೆಳವಣಿಗೆ ಹಾಗೂ ಪ್ರಸಾರ ಮಣಿಹದಲ್ಲಿ ಸಹಕರಿಸುತ್ತಿರುವ ಲೇಖಕರನ್ನು, ಜಾಹಿರಾತುದಾರರನ್ನು, ಆಜೀವ ಸದಸ್ಯರನ್ನು, ಚಂದಾದಾರರನ್ನು, ಮುದ್ರಣಾಲಯದವರನ್ನು, ಪ್ರಕಾಶಕರನ್ನು, ಸಂಪಾದಕ ಮಂಡಳಿ ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತ, ೧೯೯೮ ಎಲ್ಲರಿಗೂ ಶುಭವನ್ನುಂಟು ಮಾಡಲಿ ಎಂದು ಪ್ರಾರ್ಥಿಸುತ್ತದೆ.

**ಹೆಚ್. ವಿ. ವೀರಭದ್ರಯ್ಯ**
ಸಂಪಾದಕ

**ತ್ರಿವಿಧ ದಾಸೋಹದಲಲ್ಲದೆ ಕಾಣಬಾರದು ಕೂಡಲ ಸಂಗಮದೇವನ**





ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ಅದ್ವೈತವ ನುಡಿದ ಬದ್ಧ ಭವಿಗಳಿರಾ,
ಮನದ ಕ್ಷುದ್ರವಹಗದು ಕಾಣಿಭೋ
ತತ್ವಾರ್ಥವ ನುಡಿವ ವ್ಯರ್ಥ ಕಾಯರುಗಳಿರಾ,
ವಿಕಾರದ ಕತ್ತಲೆ ಹರಿಯದು ಕಾಣಿಭೋ,
ಶಿವಾನುಭವ ನಿಮಗೇಕೆ? ಸತ್ತ ಹಾಂಗಿರಿ ಭೋ,
ತತ್ವವತ್ತಲೆಯಾಗಿ ನೀವಿತ್ತಲೆಯಾಗಿ
ಮೃತ್ಯುವಿನ ಬಾಯ ತುತ್ತಾದಿರಲ್ಲಾ.
ತತ್ವವಿತ್ತುಗಳು ವೃಥಾ ಸತ್ತುದ ಕಂಡು
ಮೃತ್ಯುಂಜಯನ ಶರಣರು ನಗುತಿಪ್ಪರು ನೋಡಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಮನದಲ್ಲಿ ತುಚ್ಛ ವಿಷಯವಾಸನೆಗಳನ್ನು ತುಂಬಿಕೊಂಡು ಬಾಯಿಯಿಂದ ಅದ್ವೈತವನ್ನು ನುಡಿಯುವ ವ್ಯರ್ಥ ಜೀವಿಗಳಾದ ಎಲೈ ಬದ್ಧ ಭವಿಗಳೇ ನಿಮಗೆಲ್ಲಿಯದೋ ಶಿವಾನುಭವ! ನೀವು ಸತ್ತವರಂತೆ ಬಾಯಿ ಬಿಡದೆ ಸುಮ್ಮನಿಸುವುದೇ ಒಳ್ಳೆಯದು. ತತ್ವ ಒಂದು ಕಡೆ, ನೀವು ಒಂದು ಕಡೆ, ನಿಮಗೂ ತತ್ವಕ್ಕೂ ಸಂಬಂಧವೇ ಇಲ್ಲ. ಇಂತಹ ನೀವು ಸುಮ್ಮನೆ ಮೃತ್ಯು ದೇವತೆಯ ಬಾಯಲ್ಲಿ ಸಿಕ್ಕು ವ್ಯರ್ಥ ಕೆಟ್ಟು ಹೋಗುವಿರಿ. ಶಿವಶರಣರು ನಿಮ್ಮಂಥವರನ್ನು ಕಂಡು ನಗುತ್ತಿರುವರು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋ.ಸಿ.ಕೈಂ.
ಸೇ. ಸಂಘ, ಎಡೆಯೂರು-ಗದಗ)

## ಶ್ರೀವಾಣಿ

### ಬಸವ ಮಂತ್ರ

ಮನುಷ್ಯ ದೇಹ ಆತ್ಮಗಳ ಘಟಕ. ಆತ್ಮ ತನ್ನ ಅನಂತ ಯಾತ್ರೆಯಲ್ಲಿ ಧರಿಸಿದ ಮನುಷ್ಯ ದೇಹಕ್ಕೆ ಅತ್ಯಂತ ಮಹತ್ವವಿದೆ. ದೇಹದ ಬೆಲೆ ಆತ್ಮನಿಂದ. ಆತ್ಮನೇ ಇಲ್ಲವಾದರೆ ದೇಹಕ್ಕೆ ಒಂದು ಕಾಸಿನ ಕಿಮ್ಮತ್ತಿಲ್ಲ. ಅಣ್ಣ ಬಸವಣ್ಣನವರು ಹೇಳುತ್ತಾರೆ ಆತ್ಮವಿರಹಿತವಾದ "ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬರಿಲ್ಲ" ಎಂಬುದಾಗಿ. ದೇಹವೆಂಬುದು ಭೋಗಕೋಶ ಮಾತ್ರವಲ್ಲ, ತ್ಯಾಗ ಸಾಧನ, ಯೋಗಕಲಶ "ಕೂಡಲ ಸಂಗಮದೇವನ ಒಲಿಸಲು ಬಂದ ಪ್ರಸಾದ ಕಾಯ". ಪದಾರ್ಥ ಜಗತ್ತನ್ನು ಪ್ರಸಾದ ಜಗತ್ತನ್ನಾಗಿಸಲು ದೇಹ ಸಾಧನವಾಗಲೇಬೇಕು. ತನಗೆ ದತ್ತವಾದ ಇಂದ್ರಿಯ, ಕರಣಗಳನ್ನು ಉದಾತ್ತಗೊಳಿಸುವುದರ ಮೂಲಕ, ಪವಿತ್ರ ಭಾವನೆ, ಪವಿತ್ರ ದೃಷ್ಟಿಯಿಂದ ಪದಾರ್ಥ ಜಗತ್ತಿನ ಪ್ರಬಲ ಮುಖಗಳಾದ ಹೊನ್ನು, ಹೆಣ್ಣು, ಮಣ್ಣುಗಳನ್ನು ಆತ್ಮ ಸಾಕ್ಷಾತ್ಕಾರಕ್ಕೆ ಬಳಸಿಕೊಂಡ ಬಸವಾದಿ ಶರಣರ ವಿಚಾರ ಮಾರ್ಗದಲ್ಲಿ ಮುನ್ನಡೆಯಬೇಕು.

ಕಾಯಕ-ದಾಸೋಹಗಳು ಶರಣರು ಜಗತ್ತಿಗೆ ನೀಡಿದ ಸಾರ್ವಕಾಲಿಕ ತಾರಕ ಮಂತ್ರಗಳು. ಕಾಯಕ ವ್ಯಕ್ತಿಯ ಏಳ್ಗೆಯನ್ನು, ಸಮಾಜದ ಕಲ್ಯಾಣವನ್ನು ಮತ್ತು ಆತ್ಮವಿಕಾಸವನ್ನು ಪ್ರದಾನಿಸುವ ಅಮೂಲ್ಯ ತತ್ವ. ದೇಹ ಮನಸ್ಸುಗಳನ್ನು ಪವಿತ್ರ ಮಾಡುವ ಶುದ್ಧ ಸಂಜೀವಿನಿ. ಮನಸ್ಸಿನ ಏಕಾಗ್ರತೆಗೆ ಕಾಯಕ ರಾಜಮಾರ್ಗ. ದಾಸೋಹ ಸಮಾಜಾಭಿವೃದ್ಧಿಗೆ ತೆರೆದುಕೊಂಡ 'ಶಿವಪಥ'. ದಾಸೋಹದಲ್ಲಿ ಆತ್ಮ ಕಲ್ಯಾಣವಿದೆ, ಜಂಗಮಶೀಲವಾದ ಸಮಾಜದ ಉತ್ಥಾನವಿದೆ. ಶರಣರು 'ಕಾಯಕವೇ ಕೈಲಾಸ'ವೆಂದರು. ಬೇರೊಂದು ಕಣ್ಣಿಗೆ ಕಾಣದ ಕಾಲ್ಪನಿಕ ಕೈಲಾಸ ಅವರ ಆತ್ಯಂತಿಕ ಗುರಿಯಾಗಿರಲಿಲ್ಲ. ಇಹವನ್ನೇ ಪರವನ್ನಾಗಿ ಪರಿವರ್ತಿಸಿದ ಪುಣ್ಯ ಚೇತನಗಳು ಶರಣರು. ಮೋಳಿಗೆಯ ಮಾರಯ್ಯನವರು ಇಹದ ಮಣಿಹ ಮುಗಿಸಿ ಕೈಲಾಸಕ್ಕೆ ತೆರಳಬೇಕೆಂದಾಗ ಅವರ ಪುಣ್ಯಾಂಗನೆ ತಾಯಿ ಮಹಾದೇವಿಯಮ್ಮ ಹೇಳಿದ್ದಾದರೂ ಏನು? 'ಇಷ್ಟು ದಿನ ಕಂಡದ್ದಾದರೂ ಏನು? ಕೈಲಾಸವಲ್ಲವೆ? ಕಾಯಕದಿಂದ ದೂರವಾದುದು ಕೈಲಾಸವೆ? ಅಂತಹ ಭಾವನೆಯಾದರೂ ನಿಮಗೇಕೆ ಬಂತು? ಕಾಯಕವೇ ಕೈಲಾಸವಲ್ಲವೆ? ಎಂದು ಈ ಬದುಕಿಗೆ 'ಈ ಕರ್ಮೋದ್ಯೋಗ ಭೂಮಿಗೆ', 'ಮರ್ತ್ಯವೆಂಬ ಕರ್ತಾರನ ಕಮ್ಮಟ'ಕ್ಕೆ ಮಹತ್ವ ತಂದುಕೊಟ್ಟರು. ಕಾಯಕ 'ಇಲ್ಲಿ ಸಲ್ಲುವಂತೆ' ಬಾಳುವ "ಬಸವ ಮಂತ್ರ"ವಾಗಿದೆ.

# ಗುರುಕುಲ ಗಾಥಾ



-- ಕಯ್ಯಾರ ಕಿಞ್ಞಣ್ಣ ರೈ
ಅಖಿಲ ಭಾರತ ೬೬ನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು

ಸುತ್ತು ಪರ್ವತ ಪಂಕ್ತಿ, ಪ್ರಕೃತಿನಿರ್ಮಿತ ದುರ್ಗ
ದುಶ್ಶಕ್ತಿ ಬರದವೊಲು ರಕ್ಷಿಸುತಿರೆ;
ತಗ್ಗಿನ ತಪೋವನದಿ ವಾಸಿಸುವ ಋಷಿವರರು
ಬ್ರಹ್ಮರ್ಷಿಗೋತ್ರ ಸಂಜಾತರವರೆ.

ಬೆಟ್ಟಗಳ ಬುಡದಿಂದ ಹರಿವ ನದಿನದ ನಾದ
ಶುಕಪಿಕದ ಸಂಗೀತ ಹರಿಣ ನೃತ್ಯ;
ತೆಂಗುಕಂಗುಗಳು ತಲೆದೂಗುತಿರೆ ಬಯಲಲ್ಲಿ
ಸಸ್ಯಶ್ಯಾಮಲ ಶಾಲಿವನವು ನಿತ್ಯ.

ವೇದಮಂತ್ರವ ಜಪಿಸಿ, ಯಜ್ಞಯಾಗವ ನಡೆಸಿ
ಖ್ಯಾತ ಯತಿವರರ ಗುರುಕುಲ ಮೆರೆದಿದೆ;
ಆಶ್ರಮದ ಶಿಕ್ಷಣಕೆ ಶಾಂತಜೀವನ ಧನ್ಯ
ವಟುವೃಂದವಲ್ಲಿಗೆ ಸದಾ ಹರಿದಿದೆ.

ಕೃಷ್ಣನು ಸುಧಾಮನೂ, ದ್ರುಪದನೂ, ದ್ರೋಣನೂ,
ಅಲ್ಲಿ ಎಲ್ಲರುವೊಂದೆ - ನಡತೆ ಸಾಕು;
ಸಿರಿತನವೊ ಬಡತನವೊ ಜಾತಿಯೊ ವಿಜಾತಿಯೋ
ಜೀವನದಿ ನೈರ್ಮಲ್ಯವಿರಲೇ ಬೇಕು.

ಅಷ್ಟಾದಶ ಪುರಾಣ, ಶ್ರುತಿಸ್ಮೃತಿ ಸುವಿಜ್ಞಾನ,
ಕಾವ್ಯನಾಟಕ ರಸಾಲಂಕಾರ ಪೂರ್ಣ
ಕುಲಪತಿಯ ಶ್ರೀಕಂಠ ಶಂಖನಾದದಿ ಮೊಳಗಿ
ಶ್ರದ್ಧಾನ್ವಿತ ಕುಮಾರ ಹೃದಯದೊಳಗೆ

* * * *

ಸಾಹಸ್ರ ಸಾಹಸ್ರ ವರ್ಷಗಳ ಹಿಂದೆಯೇ
ಭರತವರ್ಷದ ಪುಣ್ಯ ನೆಲದಿ ನೆಲಸಿತ್ತು,
ಪಾವನ ತಪೋವನದ ಗುರುಕುಲಗಳಲ್ಲಿಯೇ
ದಶಸಹಸ್ರದ ಶಿಷ್ಯವರ್ಗ ಪರಿಸಿತ್ತು

ಆಶ್ರಮದ ಶಿಷ್ಯರಿಗೆ ಅಶನವಸನಗಳಿತ್ತು
ವಿದ್ಯಾಸುಧೆಯ ಧಾರೆಯೆರೆಯುವ ಮಹರ್ಷಿ.
ಅವನೆ ಕುಲಪತಿ - ಶಕುಂತಲೆಯ ಸಾಕಿದ ತಂದೆ
ಭರತವಂಶದ ಕೀರ್ತಿಕಲಶ ಕಣ್ವರ್ಷಿ.

ಆಶ್ರಮ ಕುಟೀರದಿ ಸದಾ ಪ್ರಣವದೋಂಕಾರ
ವೇದೋಪನಿಷತ್ತುಗಳ ಶಂಖನಾದ;
ಬುದ್ಧಿ ಬೆಳಗುತ್ತಿರಲು ದೇಹವು ದೃಢಾಕಾರ
ಶ್ರದ್ಧೆಗೂ ಗೈಮೆಗೂ ಸಾಮ್ಯವಾದ.

ಗುರುಕುಲದಿ ಬೆಳೆಸುತಿಹ ತರುಗುಲ್ಮಲತೆಗಳಿಗೆ
ಕಟ್ಟೆಯನ್ನು ನೀ ಕಟ್ಟಿ ನೀರೆರೆವ ನೀರೆಯರು;
ಶಾಂತಿಹೋಮಕೆ ಸಮಿತ್ತು, ಹಸಿವಿಗೆ ಫಲಾಹಾರ
ಬಾಣಸಕೆ ಕಟ್ಟಿಗೆಯ ತರುವ ವಟುವರರು.

ವಿದ್ಯೆ ಚಾಕರಿಗಲ್ಲ, ಬಾಳುವೆಯ ಬೆಳಕಿಂಗೆ,
ದೇಶದೇವರ ಸೇವೆಗೆಂದೆ ಸ್ನಾತಕರು;
ಎಲ್ಲವರ ಆತ್ಮವೂ ಪರಮಾತ್ಮನಂಶವೆನೆ
ನಂಬಿ ನಡೆಯುವವರವರೆ ನಿಜಕು ಸಾಧಕರು.

* * * *

ಮಾತೃಪಿತೃಗಳು ಮತ್ತೆ ಆಚಾರ್ಯ ಅತಿಥಿಯರು
ನಿನಗೆ ದೇವರು, ಮುಂದೆ ಕಲಿಕೆ ನಿಲದಿರಲಿ,
ಸತ್ಯವನೆ ಹೇಳು, ಧರ್ಮದಿ ನಿನ್ನ ನಡೆಯಿರಲಿ,
ಉತ್ತರೋತ್ತರವಾಗಿ ಬದುಕ ಬೆಳಗುತಿರು.

ಇಂತು ಹರಕೆಯ ಪಡೆದು, ಆಚಾರ್ಯನಡಿಗೆರಗಿ
ಬಾಳಿದರು ಭರತವರ್ಷದ ಸಂತತಿ;
ಮನೆತುಂಬಿ, ಮನತುಂಬಿ, ಪುತ್ರ ಪೌತ್ರರು ತುಂಬಿ
ಗುರುವರನ ವರ ಪಡೆದ ಆ ದಂಪತಿ.

* * * *

ಇದು ಗುರುಕುಲದ ಗಾಥೆ - ಭರತವರ್ಷದ ಪರಮ
ಪಾವನದ ಜೀವನದ ಶಿಕ್ಷಣದ ಸುಕಥೆ;
ಸತ್ಯಕ್ಕೆ ಗೆಲವೆಂಬ, ಮಿಥ್ಯೆಸಲ್ಲದುಯೆಂಬ,
ನಂಬುಗೆಯ ಶ್ರೀಮುಖದ ಗುರುಮಂತ್ರ ಗಾಥೆ.







## ಅಗಣ್ಯ ಪುಣ್ಯಪುರುಷ

# ಉದ್ದಾನ ಶಿವಯೋಗೀಶ್ವರ

– ಪಂ. ಚನ್ನಪ್ಪ ಎರೇಸೀಮೆ
ನಂ. 597, 7ನೇ ಮುಖ್ಯ ರಸ್ತೆ, 2ನೆ ಅಡ್ಡರಸ್ತೆ,
ವಿಜಯನಗರ, ಬೆಂಗಳೂರು-30

**ಶ್ರೀ ಸಿದ್ಧಗಂಗಾ ಕ್ಷೇತ್ರದ ಲೋಕೋತ್ತರವಾದ ಕೀರ್ತಿಕಲ್ಪ ವೃಕ್ಷಕ್ಕೆ ಬೀಜಾರೋಪಣೆಮಾಡಿ, ತೆರೆಯ ಮರೆಯಲ್ಲಿ ನಿಂತು ತಮ್ಮ ಶಿವಯೋಗ ಸಂಜನಿತಕಾರುಣ್ಯ ಸುಧಾಧಾರೆಯನ್ನು ಎರೆಯುತ್ತಿರುವ ಮಹಾಶಕ್ತಿಯೇ ಪಂಚಪುರುಷ ಶಕ್ತಿಯಿಂದ ಕೂಡಿದ್ದ ಉದ್ದಾನ ಶಿವಯೋಗಿಗಳು. ಉದ್ದಾನ ಶಿವಯೋಗಿಗಳು ತ್ರಿವಿಧದಾಸೋಹಿಗಳಾಗಿ, ಸುಮಾರು ಎಂಭತ್ತು ವರ್ಷಗಳಷ್ಟು ದೀರ್ಘಕಾಲ ಶ್ರೀ ಸಿದ್ಧಗಂಗಾ ಪುಣ್ಯಕ್ಷೇತ್ರಾಧಿಪತಿಗಳಾಗಿ ಎಸಗಿದ ದಾಸೋಹವ್ರತ ಭಾರತ ಮಠಗಳ ಚರಿತ್ರೆಯಲ್ಲಿ ಅಗ್ರಸ್ಥಾನಾಪನ್ನವಾಗಿ ನಿಲ್ಲಬಲ್ಲ ಅಂತಃಸ್ಸತ್ವದಿಂದ ಕೂಡಿದ್ದಾಗಿದೆ. ಅವರ ಅಗಾಧ ಸಂಕಲ್ಪಗಳೇ ಇಂದು ಬೃಹದಾಕಾರದಲ್ಲಿ ಅವರ ಕರಕಂಜಸಂಜಾತರಾದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಜರುಗುತ್ತಿವೆ.**

ಶ್ರೀ ಸಿದ್ಧಗಂಗಾ ಕ್ಷೇತ್ರದ ಲೋಕೋತ್ತರವಾದ ಕೀರ್ತಿಕಲ್ಪ ವೃಕ್ಷಕ್ಕೆ ಬೀಜಾರೋಪಣೆಮಾಡಿ, ತೆರೆಯ ಮರೆಯಲ್ಲಿ ನಿಂತು ತಮ್ಮ ಶಿವಯೋಗ ಸಂಜನಿತಕಾರುಣ್ಯ ಸುಧಾಧಾರೆಯನ್ನು ಎರೆಯುತ್ತಿರುವ ಮಹಾಶಕ್ತಿಯೇ ಪಂಚಪರುಷ ಶಕ್ತಿಯಿಂದ ಕೂಡಿದ್ದ ಉದ್ದಾನ ಶಿವಯೋಗಿಗಳು. ಇಂದು ಈ ಕ್ಷೇತ್ರವು ಭಾರತದ ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಪ್ರಮುಖ ಕ್ಷೇತ್ರಗಳಲ್ಲಿ ಒಂದೆನಿಸಿ ಭಾರತದ ವಿಚಾರವಾದಿಗಳ ಗಮನ ಸೆಳೆದಿದೆ. ತನ್ನ ಬಹುಮುಖವಾದ ರಚನಾತ್ಮಕ ಕಾರ್ಯ ಬಾಹುಳ್ಯದಿಂದ ನವಭಾರತ ನಿರ್ಮಾಣ ಕಾರ್ಯದಲ್ಲಿ ಗಣನೀಯ ಪ್ರಮಾಣದಲ್ಲಿ ಯಶಸ್ಸನ್ನು ಸಂಪಾದಿಸಿದೆ. ಶುದ್ಧಿ ಮತ್ತು ಸಿದ್ಧಿ, ಶುಚಿ ಮತ್ತು ರುಚಿ-ಇವು ಈ ಕ್ಷೇತ್ರದ ಪ್ರಮುಖ ವೈಶಿಷ್ಟ್ಯಗಳು. ವೀರಸಂನ್ಯಾಸಿಗಳ ಆತ್ಮಶ್ರೀ ಬಹುಸತ್ವದಿಂದ ಕೂಡಿದುದೆಂಬುದಕ್ಕೆ ಅದು ಕ್ರಿಯಾಮುಖವಾಗಿ ಹೊರಹೊಮ್ಮಿದಾಗ ಅಘಟಿತ ಘಟನೆಯೆನಿಸುತ್ತದೆಂಬುದಕ್ಕೆ ಈ ಕ್ಷೇತ್ರವೊಂದು ಜ್ವಲಂತ ನಿದರ್ಶನ.

ಇಂಥ ಪುಣ್ಯಕ್ಷೇತ್ರದಲ್ಲಿ ಆಗಿಹೋದ ಕ್ಷೇತ್ರಾಧಿಪತಿಗಳೆಲ್ಲ ಅಘಟಿತ ಘಟನಾ ಸಮರ್ಥರೇ! ಕ್ರಿ.ಶ. ಸುಮಾರು 1300 ರಿಂದ ಹರದನಹಳ್ಳಿ ಗೋಸಲ ಸಿದ್ಧೇಶ್ವರರು ಮೊದಲ್ಗೊಂಡು ಅವರ ಶಿಷ್ಯಪರಂಪರೆಯ ಶಂಕರಸ್ವಾಮಿಗಳು, ಗುಬ್ಬಿಯ ಚೆನ್ನಬಸವೇಶ್ವರರು, ತೋಂಟದ ಸಿದ್ಧಲಿಂಗ ಶಿವಯೋಗಿಗಳೇ ಮೊದಲಾದ ವೀರಶೈವವೇತಿಹಾಸ ಮಹಾಪುರುಷರ ಆಡುಂಬೊಲನಾದ ಈ ಕ್ಷೇತ್ರದಲ್ಲಿ 20 ನೆಯ ಶತಮಾನದಲ್ಲಿ ಆಗಿಹೋದ ಮಹಾ ಶಿವಯೋಗೀಶ್ವರರೇ ಉದ್ದಾನ ಶಿವಯೋಗಿಗಳು. ಆ ಅಗಣ್ಯಪುಣ್ಯ ಪುರುಷರ ಬಗೆಗೆ ಸ್ಥೂಲವಾದ ಪರಿಚಯಾತ್ಮಕ ವಿವರಣೆಯೇ ಈ ಲೇಖನದ ಪ್ರಧಾನೋದ್ದೇಶ.

### ಲಕ್ಕೂರಿನ ರುದ್ರಪ್ಪ

'ಲಕ್ಕೂರು' ಎಂಬುದೊಂದು ಕಿರುವಳ್ಳಿ; ನೆಲಮಂಗಲ ತಾಲ್ಲೂಕಿನಲ್ಲಿ ದಾಬಸಪೇಟೆಯ ಸಮೀಪದಲ್ಲಿದೆ. ಶಿವಗಂಗೆ, ಸಿದ್ಧಗಂಗೆ, ನಿಜಗಲ್ಲು, ದೇವರ ಹೊಸಹಳ್ಳಿ ಬೆಟ್ಟದ ಗುಡ್ಡಗಳ ಮಧ್ಯದ ಸುಂದರ ಸನ್ನಿವೇಶದ್ದು. ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಆ ಹಳ್ಳಿಯ ಗುರು-ಲಿಂಗ-ಜಂಗಮ ಸೇವಾಧುರೀಣರೂ, ಕೃಷಿ ಪಶುಪಾಲನೋದ್ಯೋಗ ಶೀಲರೂ ಆದ ದಂಪತಿಗಳ ಗರ್ಭದಲ್ಲಿ ಕಾರಣಿಕ ಶಿಶುವೊಂದು ಮೂಡಿಬಂದು ಶಿಶುವಿಗೆ ತಮ್ಮೂರ ಸಮೀಪದಲ್ಲಿ ದೇವರ ಹೊಸಹಳ್ಳಿಯಲ್ಲಿ ನೆಲಸಿರುವ ವೀರಭದ್ರನ ನಾಮಕರಣವನ್ನೇ ಮಾಡಿದರು, 'ರುದ್ರಪ್ಪ' ಎಂದು. ಆ ಪುಣ್ಯ ದಂಪತಿಗಳ ಕಾಯಕ ನಿಷ್ಠೆಯೇ, ಸತ್‌ಕ್ರಿಯಾಚಾರವೇ ಮೈವೆತ್ತು ಬಂದುತಿದ್ದ ರುದ್ರಪ್ಪ, ರುದ್ರಪ್ಪ ಸ್ವಲ್ಪ ದೊಡ್ಡವನಾದ ಮೇಲೆ ಅಯ್ಯಗಳ ಶಾಲೆಗೆ ಕಳಿಸಿದವರಾದರೂ ರುದ್ರಪ್ಪ ಹೆಚ್ಚಾಗಿ ಓದಲಿಲ್ಲ. ತಕ್ಕ ಮಟ್ಟಿನ ಅಕ್ಷರಜ್ಞಾನ ಪಡೆದವರಷ್ಟೆ. ಲೋಕೋತ್ತರ ತೇಜೋವಿಶೇಷರಾದವರ ಬಾಲ್ಯ ಜೀವನದ ಘಟನೆಗಳೂ ಆ ಲೋಕ ಸಾಮಾನ್ಯವಾದವುಗಳೇ ಆಗಿರುತ್ತವೆ. ಅವರು ಯಾವವೃತ್ತಿ (ಕಾರ್ಯ)ಯನ್ನೇ ಮಾಡಲಿ ಆ ಕಾರ್ಯದ ಮೇಲಿಂದ ಅವರ ಘನತೆಯನ್ನಳೆಯಲಾಗುವುದಿಲ್ಲ. ಕಾಯಕದ ಮೇಲೆ ಅವರೊತ್ತಿದ ಹೃದಯ ಮುದ್ರೆಯೇ ಗಣನೀಯವಾದುದು. ರುದ್ರಪ್ಪ ತಮ್ಮ ತಂದೆ ತಾಯಿಗಳ ವೃತ್ತಿಯಾದ ಕೃಷಿ, ಪಶುಪಾಲನಾದಿ ಕಾರ್ಯದಲ್ಲಿ ನೈಪುಣ್ಯ ಪಡೆದ. ಬರುಬರುತ್ತ ಅತ್ಯಂತ ಭಾವನಾಜೀವಿಯಾಗಿ, ಅರಣ್ಯ ಮಧ್ಯದ ಬಯಲಿನಲ್ಲಿ ಬಯಲಿನ ವ್ಯವಸಾಯದಲ್ಲಿಯೇ ಮಗ್ನನಾಗತೊಡಗಿದನು. ಅವನ ನಡೆನುಡಿಗಳು ಲೋಕಕ್ಕೆ ವಿಚಿತ್ರವಾಗತೊಡಗಿದವು. "ಲೋಕಕ್ಕೆ ತಾಂ ಮರುಳ್ ತನಗೆ ಲೋಕ ಮರುಳ್" ಎನ್ನುವಂತಾಯಿತು. ಸ್ವತಃ ತಂದೆ ತಾಯಿಗಳೇ ಮಗನ ಯೋಗ್ಯತೆಯನ್ನರಿಯದೆ ಹೋದರು.

ರುದ್ರಪ್ಪನ ಮಾತಿನಲ್ಲಿ ದಧೀಚಿಯ ಬೆನ್ನುಮೂಳೆಯಿಂದ ಮಾಡಿದ ಆಯುಧಗಳ ಮೊನಚಿತ್ತು. ಹೊಳೆಯುವ ನೇತ್ರದ್ವಯಗಳು ದೃಢ ನಿರ್ಧಾರದ ಮುಂದಾಲೋಚನೆಯ ಕಾರ್ಯಗೌರವದ್ಯೋತಕಗಳಾಗಿದ್ದವು. ಆಜಾನುಬಾಹುವಾಗಿ, ಪರಿಪುಷ್ಟದೇಹಿಯಾಗಿ ಶ್ರಮಸಾಧ್ಯವಾದ ಕಾರ್ಯಗೌರವಗಳನ್ನು ತಡೆಯಬಲ್ಲ ವಜ್ರ ರೀತಿಯಾಗಿ ಬೆಳೆದ ರುದ್ರಪ್ಪನ ಅಚಲ ನಡೆನುಡಿಗಳು, ಆ ಊರಿನ ಜನತೆಯ ಮೇಲೆ ಅಗಾಧ ಪರಿಣಾಮವನ್ನುಂಟುಮಾಡಿ ಭಯ ಭಕ್ತಿಯನ್ನುಂಟುಮಾಡ ತೊಡಗಿದವು.



ಮುಂದೆ ಇವನು ಮಹಾವ್ಯಕ್ತಿಯಾಗುತ್ತಾನೆಂದು ಊರಜನಗಳು ಭವಿಷ್ಯ ನುಡಿದುದೂ ಉಂಟು.

ರುದ್ರಪ್ಪ ಮನೆಯಲ್ಲಿ ಹೆಚ್ಚು ಕಾಲಕಳೆದವನೇ ಅಲ್ಲ. ಕೃಷಿ ಕಾಯಕ ಪಶುಪಾಲನಾದಿ ಕಾರ್ಯಮಗ್ನನಾಗಿ ಹೊರಗಿರುವುದೇ ಹೆಚ್ಚು. ಹೊರಗಿದ್ದಾಗಲೆಲ್ಲ ತಮ್ಮೂರ ಸಮೀಪದಲ್ಲಿರುವ ಚಿಕ್ಕ ಪಾಳೇಪಟ್ಟಿನ ಹಳೆಯ ದುರ್ಗವಾದ ನಿಜಗಲ್ಲು ದುರ್ಗದ ಬೆಟ್ಟದ ಕಲ್ಲು ಕಲ್ಲುಗಳ ಪರಿಚಯವನ್ನೂ ಮಾಡಿಕೊಂಡಿದ್ದನು. ಅಲ್ಲಿಂದ ಸುತ್ತಮುತ್ತ ದೂರ ದಿಗಂತಗಳಲ್ಲಿ ಮಲಗಿದ ಮದ್ದಾನೆಗಳ ಸಾಲಿನಂತೆ ಕಾಣುವ ದೇವರ ಹೊಸಹಳ್ಳಿಯ ವೀರಭದ್ರದೇವರ ಗುಡ್ಡ, ಶಿವಗಂಗೆ, ಸಿದ್ಧಗಂಗೆ, ರಾಮ ದೇವರ ಬೆಟ್ಟಗಳ ಮೇಲೆಯೇ ಇವನ ಕಣ್ಣು. ಒಮ್ಮೊಮ್ಮೆ ಏಕಾಂಗಿಯಾಗಿ ಅಲ್ಲೆಲ್ಲ ಒಬ್ಬನೇ ಮನಸ್ವಿಯಾಗಿ ಅಲೆದಾಡಿ ಬರುತ್ತಿದ್ದುದೂ ಉಂಟು. ಒಮ್ಮೊಮ್ಮೆ ನಿಜಗಲ್ಲು ದುರ್ಗದ ಚಿಕ್ಕ ಚಿಕ್ಕ ಗುಹೆಗಳಲ್ಲಿ ಹಗಲು ರಾತ್ರಿಯೆನ್ನದೆ ಮೌನವಾಗಿ ನಾಲ್ಕಾರು ರಾತ್ರಿಗಳನ್ನು ಕಳೆಯುತ್ತಿದ್ದುದೂ ಉಂಟು. ಮೇಯಲು ಅಟ್ಟಿಕೊಂಡು ಹೋಗಿದ್ದ ಪಶುಗಳು ತಮ್ಮ ಪಾಡಿಗೆ ತಾವು ಮೇದು ಮನೆ ಸೇರುತ್ತಿದ್ದವು. ಸದಾ ನೂರಾರು ಅಲೌಕಿಕಾಭಿಲಾಷೆಗಳ ತುಮುಲ ಮನಸ್ಸಿನಲ್ಲಿ ತರಂಗತರಂಗಗಳಾಗಿ ಲೋಕವನ್ನೇ ಮರೆತು ಸಮಾಧಿ ಸ್ಥಿತಿಯಲ್ಲಿ ಕುಳಿತಾಗ ಇನ್ನೇತರ ಮೇಲೆ ಪರಿವೆಯಾದೀತು. ಎರಡು ಮೂರು ದಿನಗಳವರೆಗೆ ಏಕಾಂಗಿಯಾಗಿ ಗವಿಗಳಲ್ಲಿ ಕುಳಿತು ಬರುತ್ತಿದ್ದ; "ತಾನುಂಟು! ಮೂರು ಲೋಕವುಂಟು!" ಎಂದು.

ಒಮ್ಮೆ ಬೆಟ್ಟದೊತ್ತಿನಲ್ಲಿ ತನ್ನ ಪಶುಗಳನ್ನು ಮೇಯಿಸುತ್ತಿದ್ದಾಗ ಸಿದ್ಧಪುರುಷನೊಬ್ಬನ ದರ್ಶನವಾಯಿತಂತೆ. ಆ ಸಿದ್ಧಪುರುಷನಾರು? ಎಲ್ಲಿಂದ ಬಂದನು... ಇತ್ಯಾದಿ ವಿವರಗಳೊಂದೂ ಗೊತ್ತಾಗಲಿಲ್ಲ. ಆ ಸಿದ್ಧಪುರುಷನನ್ನು ನೋಡಿದೊಡನೆಯೇ ರುದ್ರಪ್ಪನವರ ಜೀವನದಲ್ಲೊಂದು ಅಪೂರ್ವ ತೇಜೋವಿಶೇಷ ಹೊಳೆದಂತಾಯಿತು. ಅವರ ಸಹಯೋಗದಲ್ಲಿ ಕೆಲಕಾಲ ಕಳೆದ ರುದ್ರಪ್ಪ ಮುಂದೆ ತನ್ನ ಪಿತೃಗಳಿಂದಲೂ, ಇದುವರೆಗೂ ತನ್ನ ಹುಟ್ಟಿದ ಮನೆಯಲ್ಲಿ ಆಚರಿಸುತ್ತ ಬಂದಿದ್ದ ಕಾರ್ಯದಿಂದಲೂ ದೂರನಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಆಗ ಮಹಿಮಾಪುರುಷರೆಂದು ಕೀರ್ತಿತರಾಗಿದ್ದ ಅಡಿವೆಪ್ಪ ಸ್ವಾಮಿಗಳ ಪ್ರಬಲಾಕರ್ಷಣೆಗೊಳಗಾಗಿ ಸನ್ನಿಧಿಯ ದರ್ಶನ ಭಾಗಿಯಾದನು. ಆ ಸಮಯದಲ್ಲಿ ಅಟವೀಸ್ವಾಮಿಗಳು ದೀರ್ಘ ಅನಾರೋಗ್ಯದಿಂದ ಕೃಶರಾಗಿದ್ದರು. ಶಕ್ತಿಗುಂದಿದ್ದರು. ರುದ್ರಪ್ಪ ಶ್ರೀಗಳ ಅಡಿಗೆ ಪರಿಚಾರಕನಾಗಿ, ಶ್ರೀಗಳಿಗೆ ಪ್ರಸಾದ ಸಿದ್ಧಪಡಿಸಿ ನೀಡುವ ಪರಿಚರ್ಯೆಯಲ್ಲಿದ್ದನು. ಆತನ ನಿರಂತರ ಸೇವೋಪಚಾರಗಳಿಂದ ಶ್ರೀ ಅಟವೀಸ್ವಾಮಿಗಳಿಗೆ ದೀರ್ಘಕಾಲದಿಂದ ಅನುಸರಿಸಿ ಬಂದಿದ್ದ ಕಾಯಿಲೆ ಸಂಪೂರ್ಣ ಗುಣವಾಯಿತು. ರುದ್ರಪ್ಪನ ಹಸ್ತಸಿದ್ಧಿ ಮತ್ತು ಸೇವಾನಿಷ್ಠೆಯಿಂದ ಶ್ರೀಗಳು ಬಹಳ ಸಂತೋಷಪಟ್ಟರು. ಆತನಲ್ಲಿ ಶ್ರೀಗಳವರಿಗೆ ವಿಶೇಷ ವಾತ್ಸಲ್ಯವುಂಟಾಗಿ ಅನುಗ್ರಹವನ್ನು ದಯಪಾಲಿಸಿದರು.

ಅವರು ಶ್ರೀ ಕ್ಷೇತ್ರದಲ್ಲಿ ಪ್ರಾರಂಭಿಸಿದ ದಾಸೋಹ ಕ್ರಿಯೆಯೇ ಮೊದಲಾದ ಬಹುಮುಖ ಕಾರ್ಯಗೌರವಗಳನ್ನು ನೋಡಿಕೊಂಡು ಹೋಗುವ ಕಾರ್ಯಕ್ಕಾಗಿ ತಂದೆತಾಯಿಗಳು ರುದ್ರಪ್ಪನನ್ನು ಮಠಕ್ಕೊಪ್ಪಿಸಿದರು. ಅಂದಿನಿಂದ ರುದ್ರಪ್ಪನು ಕ್ಷೇತ್ರದ ಇಂದಿನ ಕೀರ್ತಿಕಲ್ಪವೃಕ್ಷಕ್ಕೆ ತನ್ನ ಅದ್ಭುತ ಸಾಮರ್ಥ್ಯದ, ಕ್ರಿಯಾಮುಖದ, ಶಿವಯೋಗದ, ಕರ್ತೃತ್ವಶಕ್ತಿಯ ದೇವಗಂಗೆಯನ್ನೇ ಎರೆದು ಮಹಾ ವಿಟಪಿಯನ್ನಾಗಿಸುವ ಭಾರವನ್ನು ಹೆಗಲ ಮೇಲೆ ಹೊತ್ತನು. ಸಿದ್ಧಗಂಗಾ ಕ್ಷೇತ್ರದ ಭಾಗ್ಯದ ಬಾಗಿಲು ತೆರೆಯಿತು.

### ಲಕ್ಕೂರಿನ ರುದ್ರಪ್ಪ ಉದ್ದಾನ ಶಿವಯೋಗಿಯಾದುದು

**ರು**ದ್ರಪ್ಪನವರು ಶ್ರೀಕ್ಷೇತ್ರದ ಸೇವಾಕೈಂಕರ್ಯಕ್ಕೆ ಬಂದುದೇ ತಡ, ಅಡವೀಸ್ವಾಮಿಗಳಿಗೆ ಸಹಸ್ರ ಬಾಹುಬಲ ಬಂದಂತಾಯಿತು. ಶ್ರೀಕ್ಷೇತ್ರವೆಂಬ ಉದ್ಯಾನವನಕ್ಕೆ ವಸಂತಾಗಮನವಾದಂತಾಯಿತು. ರುದ್ರಪ್ಪ ಶ್ರೀಕ್ಷೇತ್ರಕ್ಕೆ ಸಿದ್ಧಿಗಾಗಿ ಬಂದರೇ? ಸಿದ್ಧಪುರುಷರಾಗಿ ಬಂದರೆ? ಎರಡೂ ಬಿಡಿಸಲಾರದ ಕಗ್ಗಂಟು. ರುದ್ರಪ್ಪ ಹಿಂದೆ ಬಾಲ್ಯದಲ್ಲಿ ಅದೆಷ್ಟೋಸಲ ಬಂದು ಹೋಗಿದ್ದ. ತನ್ನೂರಿನಿಂದ ಪಶ್ಚಿಮ ದಿಗಂತದಲ್ಲಿ ಬೂದು ಬೂದು ಬಣ್ಣದಿಂದ ಕಾಣುವ ಸಿದ್ಧಗಂಗಾ ಬೆಟ್ಟವನ್ನು ದಿನಾಲು ನೋಡುತ್ತ ಎತ್ತಿ ಕೈಮುಗಿಯುತ್ತಿದ್ದ. ಸಿದ್ಧಗಂಗಾ ಬೆಟ್ಟದ ನೆಲ್ಲಿಯಕಾಯಿ, ಲಕ್ಕೂರಿನ ಉಪ್ಪು; ಎಲ್ಲಿಗೆಲ್ಲಿಯ ಸಂಬಂಧವೋ! ರುದ್ರಪ್ಪ ಸಿದ್ಧಗಂಗಾ ಕ್ಷೇತ್ರಾಧಿಪತಿಯಾಗಿ ಅದ್ಭುತ ಬಾಲ್ಯದಲ್ಲಿ ಅವನನ್ನು ಕಂಡವರು ಎಣಿಸಿರಲಿಕ್ಕಿಲ್ಲ; ಸ್ವತಃ ರುದ್ರಪ್ಪನೇ ಆಲೋಚಿಸಿರಲಿಕ್ಕಿಲ್ಲ. ರುದ್ರಪ್ಪನವರೀಗ ಮಹಾಕಾರಣಿಕಾರದ ಶ್ರೀ ಗೋಸಲ ಸಿದ್ಧೇಶ್ವರರು ವಿಲಾಸದ ಆಡುಂಬೊಲನಾದ ಶ್ರೀ ಸಿದ್ಧಗಂಗಾಕ್ಷೇತ್ರಕ್ಕೊಂದು ದಿವ್ಯ ಚೇತನವಾಗಿ ಪರಿಣಮಿಸಿದರು. ಅನೇಕ ಅದ್ಭುತಘಟನೆಗಳು ಅಟವೀಸ್ವಾಮಿಗಳವರ ಸಮ್ಮುಖದಲ್ಲಿಯೇ ಜರುಗಿದವು. ಶ್ರೀ ಸಿದ್ಧಲಿಂಗೇಶ್ವರನೇ ಇವರನ್ನು ಈ ಮಹಾಕ್ಷೇತ್ರಕ್ಕೆ ಬರಮಾಡಿಕೊಂಡಿರುವನೆಂಬ ಭಾವ ಅಡವೀಸ್ವಾಮಿಗಳಲ್ಲಿ ಮೂಡಿತು. ಇಷ್ಟು ವೇಳೆಗೆ ಶ್ರೀಮಠದ ಅಧಿಪತಿಗಳಾಗಿದ್ದ ಶ್ರೀ ನಿ॥ ಪ್ರ॥ ಸ್ವ॥ ಶ್ರೀ ಸಿದ್ಧಲಿಂಗ ಶಿವಯೋಗಿಗಳೆಂಬುವರು ಲಿಂಗೈಕ್ಯರಾಗಿ ಹೋಗಿದ್ದರು. ಅಟವೀಶ್ವರಸ್ವಾಮಿಗಳು ಶ್ರೀ ರುದ್ರಪ್ಪನವರೇ ಈ ಕ್ಷೇತ್ರಾಧಿಪತಿಗಳಾಗಲು ಅರ್ಹವಟುಗಳೆಂದು ತೀರ್ಮಾನಿಸಿ ಅವರಿಗೆ ಮಠದ ಆಧಿಪತ್ಯವನ್ನು ವಹಿಸಿ ಆಶೀರ್ವದಿಸಿ, ತಾವು ಮೊದಲು ಜೀರ್ಣೋದ್ಧಾರಗೊಳಿಸಿದ್ದ ಗುಬ್ಬಿ ಮತ್ತು ತೊಟ್ಟಲಕೆರೆ ಮಠಗಳ ವ್ಯವಸ್ಥೆಗಾಗಿ ತೆರಳಿದರು. 1900ರಲ್ಲಿ ತಮ್ಮ ತೊಟ್ಟಲಕೆರೆ ಮಠದಲ್ಲಿಯೇ ಲಿಂಗೈಕ್ಯರಾದರು. ಆ ಮೊದಲೇ ತಮ್ಮ ಗುರುವರ್ಯರ ಅನುಗ್ರಹಕ್ಕೆ ಪಾತ್ರರಾಗಿದ್ದ ಲಕ್ಕೂರಿನ ರುದ್ರಪ್ಪನವರು ಶ್ರೀ ನಿ. ಪ್ರ. ಸ್ವರೂಪಿ ಉದ್ದಾನ ಶಿವಯೋಗಿಗಳೆಂಬ ನೂತನಾಭಿಧಾನವನ್ನು ಪಡೆದು ಶ್ರೀ ಸಿದ್ಧಗಂಗಾ ಪುಣ್ಯಕ್ಷೇತ್ರಾಧಿಪತಿ ಗಳಾದರು.

ಆ ವೇಳೆಗೆ ಮಠದ ದಾಸೋಹ ಸಲಕರಣೆಗಳೆಲ್ಲ ಅಸ್ತವ್ಯಸ್ತವಗಾಗಿ, ಮುಂದಿನ ಕಾರ್ಯ ವ್ಯವಸ್ಥೆ ಕಠಿಣವೆನಿಸಿತ್ತು. ಹಲವಾರು ಸಮಸ್ಯೆಗಳು ಎದುರಾದವು. ಶ್ರೀಗಳು ಆಲೋಚನಾ ಪರರಾದರು. ಧೈರ್ಯಗೆಡದೆ ಎಲ್ಲವೂ ಶಿವನೊಡ್ಡಿದ ಪರೀಕ್ಷೆ ಎಂದು ಭಾವಿಸಿದರು.

### ಗುರುಕೃಪೆ

ಒಮ್ಮೆ ಶ್ರೀ ಉದ್ದಾನ ಶಿವಯೋಗಿಗಳು ಶಿವಯೋಗ





ನಿದ್ರಾಮುದ್ರೆಯಲ್ಲಿರುವಾಗ ಶ್ರೀ ಅಟವೀ ಸ್ವಾಮಿಗಳು ಸ್ವಪ್ನದಲ್ಲಿ ಗೋಚರಿಸಿ "ನೀನು ನನ್ನ ಗದ್ದುಗೆಯ ಕಟ್ಟಡವನ್ನು ಕಟ್ಟಿಸು ನಿಷ್ಠೆಯಿಂದಿರು" ಎಂದು ಹೇಳಿ ಅದೃಶ್ಯವಾದರಂತೆ. ಸ್ವಲ್ಪ ಹೊತ್ತಾದ ಮೇಲೆ ಮತ್ತೆ ದರ್ಶನ ಕೊಟ್ಟು "ಹಣಕ್ಕಾಗಿ ನೀನು ಚಿಂತಿಸಬೇಡ. ಸಿದ್ಧಲಿಂಗೇಶ್ವರನು ಒದಗಿಸುತ್ತಾನೆ ಕಾರ್ಯಪ್ರಾರಂಭಿಸು" ಎಂದು ಅಪ್ಪಣೆ ಮಾಡಿದರಂತೆ. ಶ್ರೀಗಳ ಚಿಂತೆ ಮಾಯವಾಯಿತು. ಧೈರ್ಯ ಕುಡಿಯಿಟ್ಟಿತು.

ಮಾರನೆ ಬೆಳಿಗ್ಗೆ ಮುಂಜಾವದಲ್ಲೆದ್ದರು ಶ್ರೀಗಳು. ಗುರುಧ್ಯಾನ ಪರವಶರಾಗಿ ತಮ್ಮ ಪ್ರಾತರಾಹ್ನಿಕಗಳನ್ನು ಮುಗಿಸಿ, ಗುರವಿನಾಣತಿಯಂತೆ, ಗದ್ದುಗೆ ಕಟ್ಟಡಕ್ಕೆ ತಳಹದಿ ಹಾಕಲು ತಾವೇ ಗುದ್ದಲಿ ಹಿಡಿದು ಗುರ್ತಿಸಿದರು. ಅಷ್ಟರಲ್ಲಿ ಒಬ್ಬ ರೆಡ್ಡಿ ಭಕ್ತನು ಬಂದು "ಬುದ್ಧೀ, ಶ್ರೀಗಳ ಆಶೀರ್ವಾದದಂತೆ ನನಗೊಂದು ಗಂಡುಮಗುವಾಯಿತು. ಹರಕೆಯಂತೆ ಪಾದಕಾಣಿಕೆ ತಂದಿದ್ದೇನೆ ಒಪ್ಪಿಸಿಕೊಳ್ಳಬೇಕು." ಎಂದು ಹೇಳಿ ಸಾಷ್ಟಾಂಗ ಪ್ರಣಾಮದೊಂದಿಗೆ ಹಣದ ಗಂಟನ್ನು ಶ್ರೀಗಳ ಪದತಲದಲ್ಲಿಟ್ಟನು. ಅದರಲ್ಲಿ 200 ರೂಪಾಯಿಗಳಿದ್ದವು. "ಅಂದು ಪ್ರಾರಂಭವಾಯಿತು. ನೋಡೋ ಅಣ್ಣ ಅಟವೀಸ್ವಾಮಿಗಳ ಕೃಪೆ" ಎಂದು ಸಂತೋಷದಿಂದ ಹೇಳಿದರು. ತಮ್ಮ ಆಪ್ತ ಶಿಷ್ಯ ಕಾಳಪ್ಪ (ಚರಮೂರ್ತಿ ಶ್ರೀ ಮಹಾಲಿಂಗಸ್ವಾಮಿಗಳು) ನವರಿಗೆ ಅಂದಿನ ಮುಂದಿನ ಎಲ್ಲಾ ಕಾರ್ಯಗಳಿಗೂ ಅವರಿಗೆ ಭುಜ ತಟ್ಟಿದಂತಾಯಿತು. ಶ್ರೀಗುರು ಕೃಪೆಯಿಂದ ಗುರುಗಳ ಗದ್ದುಗೆಕಟ್ಟಡವೂ ಪೂರ್ಣವಾಯಿತು. ದಾಸೋಹಕ್ಕೆ ಬೇಕಾದ ಸಕಲ ಸಲಕರಣೆಗಳೂ ಕೂಡಿ ಬಂದವು. ನೂತನ ಕಟ್ಟಡಗಳೂ ಒಂದೊಂದಾಗಿ ನಿರ್ಮಿತವಾದವು.

### ದಾಸೋಹ ತಪೋಧನ

**ಉ**ದ್ದಾನ ಶಿವಯೋಗಿಗಳು ಲೌಕಿಕ ದೃಷ್ಟಿಯಲ್ಲಿ ವಿದ್ಯಾವಂತರಲ್ಲ. ಅಷ್ಟಿಷ್ಟು ಓದು ಬರಹ ಬರುತ್ತಿತ್ತಲ್ಲದೆ ಕುರಿತೋದಿದ ಪರಿಣತ ವಿದ್ವಾಂಸರಲ್ಲ. ಆದರೆ ಅವರ ವಿದ್ಯಾವೈದುಷ್ಯದ ಸಂಪದ್ಭರಿತ ವ್ಯಕ್ತಿತ್ವದ ಅರಿವು ಕೆಲವರಿಗೆ ಮಾತ್ರ ಗೊತ್ತಿತ್ತು.

ಅವರದು ಅಕ್ಷರ ವಿದ್ಯೆಯಲ್ಲ, ಆಧ್ಯಾತ್ಮವಿದ್ಯೆ; ಶಿವಯೋಗ ಸಂಪತ್ಸಮೃದ್ಧಿಯ ವಿದ್ಯೆ; ಲೋಕಸಂಗ್ರಹಣಾಧಾರಣ ವಿದ್ಯೆ; ಸರ್ವಲೋಕೋಪಕಾರಕ ವಿದ್ಯೆ. ಅವರು ಬಸವಣ್ಣನವರಂತೆ ಪರುಷಶಕ್ತಿಯನ್ನು ಪಡೆದವರು. ಶ್ರೀ ಮಠಕ್ಕೆ ಹೆಚ್ಚು ಹೆಚ್ಚಾಗಿ ಜನ ಬರಬೇಕು; ಅವರೆಲ್ಲ ತೃಪ್ತಿಯಾಗಿ ಪ್ರಸಾದ ಸ್ವೀಕರಿಸಬೇಕು; ದಾಸೋಹ ವ್ಯವಸ್ಥೆ ಕ್ರಮಬದ್ಧವಾಗಿ ಸಾಗಬೇಕು; ವಿದ್ಯಾರ್ಥಿಗಳು ಮಠಕ್ಕೆ ಬರಬೇಕು; ಚೆನ್ನಾಗಿ ಊಟ ಮಾಡಬೇಕು; ಚೆನ್ನಾಗಿ ಓದಬೇಕು. ಓದಿದವರನ್ನು ಸ್ವಾಮಿಗಳವರು ಕಲ್ಲುಸಕ್ಕರೆ, ಹಣ್ಣು, ಬಟ್ಟೆಬರೆ ಎಲ್ಲವನ್ನು ತಾವೇ ಕೈಯಾರ ಕೊಟ್ಟು ಪ್ರೋತ್ಸಾಹಿಸುತ್ತಿದ್ದರು. ತಮ್ಮ ಮನಸ್ಸಿಗೆ ಒಬ್ಬ ಹುಡುಗ ಬುದ್ಧಿವಂತನೆಂದು ಹೊಳೆದರಾಯಿತು. ಮಠಕ್ಕೆ ಬಂದವರೆದುರು ಆ ವಿದ್ಯಾರ್ಥಿಯ ಗುಣಗಾನ ಮಾಡದೆ ಇರುತ್ತಿರಲಿಲ್ಲ. ಇದರಿಂದ ವಿದ್ಯಾರ್ಥಿಗಳಿಗೆ ಆತ್ಮಪ್ರತ್ಯಯ ತುಂಬಿ ಇನ್ನೂ ಶ್ರದ್ಧೆಯಿಂದ ಅವರು ಓದಿ ಯಶಸ್ವಿಗಳಾಗುತ್ತಿದ್ದರು.

ನಿಚ್ಚ ನಿಚ್ಚ ಮಠದ ಅಪಾರ ಖರ್ಚುವೆಚ್ಚಗಳಿಗೆಲ್ಲ ಉದ್ದಾನ ಶಿವಯೋಗಿಗಳ ಜೋಳಿಗೆಯ ಬಲವೇ ಬಲ. ದಾಸೋಹ ವ್ಯವಸ್ಥೆ ಅಟವೀಸ್ವಾಮಿಗಳವರ ಕಾಲಕ್ಕಿಂತ ಶತಾಧಿಕ; ಸಹಸ್ರಾಧಿಕ. ಆದರೆ ಒಂದು ಮಾತು : ಉದ್ದಾನ ಸ್ವಾಮಿಗಳವರು ಯಾರನ್ನಾಗಲಿ ಎಂದೂ ಯಾಚಿಸಿದವರೇ ಅಲ್ಲ. ಆಗಾಧ ಸಂಕಲ್ಪ ಶಕ್ತಿ ವಿಶಿಷ್ಟರಾದ ಅವರ ಸಂಕಲ್ಪಕ್ಕೆ ಎಂದೂ ಅಡೆತಡೆ ಬಂದಂತಿಲ್ಲ. ಜೋಳಿಗೆಯ ಮಹತ್ತು ಬೃಹತ್ತುಗಳೇನೆಂಬುದನ್ನು ನೋಡಬೇಕಾದರೆ ಇಂದಿಗೂ ಶ್ರೀ ಸಿದ್ಧಗಂಗೆಗೇ ಹೋಗಿ ನೋಡಬೇಕು. ಬೇಡದ ಗುರು, ಬೇಡಿಸಿಕೊಳ್ಳದ ಭಕ್ತ. ಈ ಅನ್ಯೋನ್ಯ ಸಂಬಂಧ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಈಗಲೂ ಅನ್ವಯಿಸುತ್ತದೆ.



ದೀನರು, ದಲಿತರು, ಜೀವದ ಅನೇಕ ಕಷ್ಟಕಾರ್ಪಣ್ಯಗಳಲ್ಲಿ ನೊಂದು ಬೆಂದವರು ಶ್ರೀಗಳವರ ಹತ್ತಿರ ಬಂದು ಅವರ ಪರುಷ ದೃಷ್ಟಿಯಿಂದ ಸುಖಿಗಳಾಗುತ್ತಿದ್ದರು. ಅವರು ಬರೆದು ಕಟ್ಟಿದ ಉದ್ದರಣೆಯಿಂದ (ರಕ್ಷಾಬಂಧದಿಂದ) ದೈಹಿಕ ಮಾನಸಿಕ ನೆಮ್ಮದಿ ಪಡೆದು ಸುಖಿಸುತ್ತಿದ್ದರು. 'ಸಿದ್ಧಲಿಂಗೇಶನ ಕೃಪೆಯಿಂದ ಎಲ್ಲವೂ ಸರಿಹೋಗುತ್ತದೆ, ಹೆದರಬೇಡಿ' ಎಂಬುದೇ ಶ್ರೀಗಳವರ ಅಭಯವಾಣಿ.

### ನ್ಯಾಯಾಲಯ

**ಉ**ದ್ದಾನೇಶ್ವರರು ನ್ಯಾಯ ನಿಷ್ಠುರವಾದಿಗಳು; ದಯಾದಾಕ್ಷಿಣ್ಯ ಪರರಲ್ಲ. ಸುಳ್ಳಿನಿಂದ ಸತ್ಯವನ್ನು ಮುಚ್ಚುವ ಜನರಿಗೆ ತಕ್ಕ ಬುದ್ಧಿಯನ್ನು ಕಲಿಸುವುದು ಇವರ ಲೋಕ ನಡವಳಿಕೆಯನ್ನು ತಿದ್ದುವ ಮಹಾ ಗುಟ್ಟಾಗಿತ್ತು. ಸುತ್ತ ಹತ್ತು ಹರದಾರಿಯ ಗ್ರಾಮಾಂತರ ಪ್ರದೇಶಗಳ ದೊಡ್ಡ ದೊಡ್ಡ ವ್ಯಾಜ್ಯಗಳು ಉದ್ದಾನಸ್ವಾಮಿಗಳಿಂದಲೇ ಮರಿಯಬೇಕು. ಶ್ರೀಗಳು ಹೇಳಿದ ತೀರ್ಮಾನಕ್ಕೆ ಯಾರೂ ತುಟಿಪಿಟಕ್ ಎನ್ನುವಂತಿಲ್ಲ. ಕೋರ್ಟು ಕಛೇರಿಗಳಲ್ಲಿ ತೀರ್ಮಾನಗೊಳ್ಳದ ಎಷ್ಟೋ ವ್ಯಾಜ್ಯಗಳು ತೀರ್ಮಾನಗೊಳ್ಳುತ್ತಿದ್ದ ಕಾರಣ ಶ್ರೀ ಕ್ಷೇತ್ರವೊಂದು ದೊಡ್ಡ ನ್ಯಾಯಾಸ್ಥಾನವೇ ಆಗಿತ್ತು. ಆ ಸಂಪ್ರದಾಯ ಈಗಲೂ ನಡೆದು ಬರುತ್ತಿದೆ.

ಶ್ರೀಗಳವರ ಎರಡೂ ಪಕ್ಷದವರನ್ನು ನಿರ್ದಿಷ್ಟ ಪಡಿಸಿದ ಅವಧಿಗೆ ಮಠಕ್ಕೆ ಬರಮಾಡಿಕೊಂಡು ವಾದ ವಿವಾದಗಳನ್ನು ಗ್ರಹಿಸಿ ತೀರ್ಪುಕೊಟ್ಟರಾಯಿತು, ಅದೇ ಶಾಸನ. ಆ ಮೇಲೆ ಎರಡೂ ಪಕ್ಷದವರು ಮಠದಲ್ಲಿ ಸ್ನಾನ ಪೂಜಾದಿಗಳನ್ನು ಮಾಡಿ ಪ್ರಸಾದ ಸ್ವೀಕರಿಸಿ ಎಂದಿನಂತೆ ಅನ್ಯೋನ್ಯವಾಗಿ ನಡೆದುಕೊಳ್ಳಬೇಕು. ಹೊರಡುವಾಗ ಇಬ್ಬದಿಯವರೂ ಶ್ರೀಗಳವರಿಗೆ ನಮಸ್ಕಾರ ಹಾಕಿ, ಎಂದಿನಂತೆ ಅನ್ಯೋನ್ಯವಾಗಿ ನಡೆದುಕೊಳ್ಳುತ್ತೇವೆಂದು ಹೇಳಿ ಹೋಗಬೇಕು. ಇಂಥ ವ್ಯವಸ್ಥೆಯಿಂದ ಸಾಮಾಜಿಕ ನೆಮ್ಮದಿ ಕುದುರುವುದೆಂದು ಹೇಳಬೇಕಾದುದೇ ಇಲ್ಲ.

ನ್ಯಾಯ ತೀರ್ಮಾನ ಕೇವಲ ವೀರಶೈವ ಜನಾಂಗದ್ದಷ್ಟೇ ಅಲ್ಲ. ಶಿವಯೋಗಿಗಳು ಆ ಭಾವನೆಯನ್ನಿಟ್ಟುಕೊಂಡವರೂ ಅಲ್ಲ. ಎಲ್ಲ ಕೋಮಿನವರೂ ಉದ್ದಾನ ಶಿವಯೋಗಿಗಳಲ್ಲಿ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಮಹಮದೀಯರೂ ಹೊರತಲ್ಲ. ಊಟದಲ್ಲಿ, ಉಪಚಾರದಲ್ಲಿ, ಮಠದ ಸೇವೆಯಲ್ಲಿ, ಮಠಕ್ಕೆ ದಾನ ಮಾಡುವುದರಲ್ಲಿ



ವ್ಯಾಜ್ಯ ಬಗೆಹರಿಸಿಕೊಳ್ಳುವುದರಲ್ಲಿ, ಓದುವಲ್ಲಿ, ಬರೆಯುವಲ್ಲಿ ಎಲ್ಲದರಲ್ಲೂ ಶ್ರೀಮಠ ಸಮಸ್ತ ಕೋಮಿನವರಲ್ಲೂ ತಮ್ಮ ಮನೆಯೆಂಬ ಭಾವದ್ದು.

ಅವರರ ಲೋಕೋಪಕಾರಕ ನಡೆನುಡಿಗಳು ಅನ್ಯಾದೃಶವಾದವು. 1917ನೆಯ ಇಸ್ವಿಯಲ್ಲಿಯೇ ಉದ್ದಾನ ಶಿವಯೋಗಿಗಳು ಸಾರ್ವಜನಿಕ ಉಚಿತ ಪ್ರಸಾದ ವಸತಿಯ ವಿದ್ಯಾರ್ಥಿ ನಿಲಯ ತೆರೆದರು. ಆ ಕಾಲದಲ್ಲಿ ಸರಕಾರವೇ ಸಾರ್ವಜನಿಕ ವಿದ್ಯಾರ್ಥಿ ನಿಲಯಗಳನ್ನು ತೆರೆಯಲಿಕ್ಕೆ ಹೆದರಿ, ಕೋಮುವಾರು ವಿದ್ಯಾರ್ಥಿ ನಿಲಯಗಳನ್ನು ತೆರೆಯುತ್ತಿತ್ತು. ಸಂಸ್ಕೃತವೆಂಬುದೊಂದು ಭಾಷೆ; ಅದನ್ನು ಎಲ್ಲ ಕೋಮಿನವರೂ ಓದಬಹುದೆಂಬ ಸತ್ಸಂಪ್ರದಾಯವನ್ನು ಹಾಕಿಕೊಟ್ಟವರೂ ಪ್ರಾಯಶಃ ಉದ್ದಾನ ಶಿವಯೋಗಿಗಳೇ. ಒಟ್ಟಿನಲ್ಲಿ ಉದ್ದಾನ ಶಿವಯೋಗಿಗಳು ಸಿದ್ಧಗಂಗೆಯ ಶ್ರೀ ಸಿದ್ಧಲಿಂಗೇಶ್ವರನ ತಪೋಭೂಮಿಯಲ್ಲಿ, ಅವಿಮುಕ್ತ ಕ್ಷೇತ್ರದಲ್ಲಿ ಬೆಳೆದುನಿಂತ ದೊಡ್ಡ ಸುರತರು. ಆ ತರುವಿನ ನೀಳವಾದ ಶಾಖೋಪಶಾಖೆಗಳು ಆ ಭಾಗದ ಊರೂರು ಮನೆಮನೆಗಳವರೆಗೂ ಚಾಚಿ ನಿಂತು ಫಲಛಾಯಾಸಮನ್ವಿತ ಗೊಳಿಸಿತ್ತು. ಅದರ ಫಲವನ್ನುಂಡು ತೃಪ್ತರಾದವರೂ, ಛಾಯೆಯಲ್ಲಿ ವಿಶ್ರಮಿಸಿ ಶಾಂತರಾದವರೂ ಅಸಂಖ್ಯಾತರು.

ಇನ್ನೊಂದು ಮಹತ್ವದ ಅಂಶವೆಂದರೆ - ತಮ್ಮ ಮಠದಲ್ಲಿ ವಿದ್ಯಾಭ್ಯಾಸ ಮಾಡಿಸಿ, ಕಾಯಕದ ಮರ್ಮವನ್ನು ತಿಳಿಸಿ, ಮಠಮಾನ್ಯಗಳನ್ನು ಆಶ್ರಯಿಸಿ, ಧರ್ಮ ಪ್ರಸಾರದ ಗುರುತರ ಹೊಣೆಗಾರಿಕೆಯ ಕಾರ್ಯನಿರ್ವಹಣಾ ಸಾಮರ್ಥ್ಯ ಪಡೆದ ವಟುಗಳನ್ನು ಸಿದ್ಧಗೊಳಿಸುವುದೂ ಇವರ ಇನ್ನೊಂದು ಬೃಹದ್ಯೋಜನೆ. ಈ ಕಾರ್ಯ ಇಂದಿಗೂ ಅಧಿಕ ಪ್ರಮಾಣದಲ್ಲಿಯೇ ನಡೆಯುತ್ತಿದೆ. ಉದ್ದಾನಸ್ವಾಮಿಗಳವರ ಕೃಪಾಕಟಾಕ್ಷಕ್ಕೆ ಪಾತ್ರವಾದ ವಟುವೆಂದರಾಯಿತು. ಎಲ್ಲರಿಗೂ ಅಚ್ಚುಮೆಚ್ಚು.

**ಶ್ರೀ ಶ್ರೀ ಶಿವಕುಮಾರಸ್ವಾಮಿಗಳು**

ಉದ್ದಾನಸ್ವಾಮಿಗಳು ತಮ್ಮ ಪ್ರಬಲಾಕರ್ಷಣೆಗೆ ಒಳಗುಮಾಡಿ 'ಶಿವಣ್ಣ ಎಂಬ ವಿದ್ಯಾರ್ಥಿನಿಯನ್ನು ತಮ್ಮ ಮಠಕ್ಕೆ ವಟುವಾಗಿ ಸ್ವೀಕರಿಸಿ ಅವರಿಗೆ 'ಶ್ರೀ ಶಿವಕುಮಾರಸ್ವಾಮಿಗಳು' ಎಂಬ ನೂತನ ನಾಮಕರಣದಿಂದ ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡ ಮೇಲಂತೂ ಸಮಸ್ತ ಭಕ್ತವೃಂದದ ಅಪಾರ ಹರ್ಷೋತ್ಸಾಹಗಳಿಗೆ ಕಾರಣವಾಗಿತ್ತು. ಇದನ್ನು ಅರಿತ ಪೂಜ್ಯತಪಸ್ವಿ ದೇಗುಲಮಠದ ಶ್ರೀ ನಿರ್ವಾಣ ಮಹಾಸ್ವಾಮಿಗಳು ತಮ್ಮ ಮಠಕ್ಕೂ ಉದ್ದಾನ ಶಿವಯೋಗಿಗಳವರ ಕೃಪಾಪಾತ್ರರಾದ ವಟುಗಳೇ ಬೇಕೆಂಬ ಸಂಕಲ್ಪವುಳ್ಳವರಾದರು. ಅದೇ ಮೇರೆಗೆ ಕನಕಪುರದ ಪ್ರಮುಖರೊಡನೆ ವಿಚಾರವಿನಿಮಯ ಮಾಡಿ ಶ್ರೀ ಕೆ. ಪಿ. ಪರಮಶಿವಯ್ಯನವರು ಮತ್ತು ಶ್ರೀ ಪಂ. ಚ. ವೀರಭದ್ರಪ್ಪನವರು ಮುಂತಾದ ಪ್ರಮುಖರನ್ನು ಸಿದ್ಧಗಂಗೆಗೆ ಕಳಿಸಿಕೊಟ್ಟರು. ಅವರು ಸಿದ್ಧಗಂಗೆಗೆ ಬಂದು ಉದ್ದಾನ ಶಿವಯೋಗಿಗಳಲ್ಲಿ ಕನಕಪುರ ದೇಗುಮಠದ ಉತ್ತಾರಾಧಿಕಾರಕ್ಕೆ ಯೋಗ್ಯ ವಟುವೊಂದುಬೇಕು. ಆ ವಟುವು ತಮ್ಮ ಅನುಗ್ರಹಕ್ಕೆ ಪಾತ್ರರಾದುದೇ ಆಗಬೇಕೆಂಬುದು ನಿರ್ವಾಣಮಹಾಸ್ವಾಮಿಗಳವರ ಸಂಕಲ್ಪ ಎಂಬುದಾಗಿ ಬಿನ್ನವಿಸಿಕೊಂಡರು. ಆಗ ಉದ್ದಾನ ಸ್ವಾಮಿಗಳವರ ಅತ್ಯಂತ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿದ್ದ ವಿದ್ಯಾರ್ಥಿಗಳಲ್ಲಿ ಕೆಂಬಳ್ಳು ಗ್ರಾಮದ ಕಾಳಪ್ಪ ಎಂಬುವರು ಪ್ರಮುಖರಾಗಿದ್ದರು. ಅವರು ತಮ್ಮ ಗುರುಸೇವಾತತ್ಪರತೆ, ವೈರಾಗ್ಯಬುದ್ಧಿ, ಸಹನಶಕ್ತಿ, ದಕ್ಷತೆ, ಪಾದರಸದಂತಹ ಕಾರ್ಯ ಚಟುವಟಿಕೆ, ಗಂಭೀರ ಸ್ವಭಾವ, ನಿರ್ದಾಕ್ಷಣ್ಯ ನಡೆನುಡಿ, ಸದಾ ನಗುಮುಖದ ಮಾತುಕತೆ, ಯಾವ ಕಾರ್ಯವನ್ನೂ ಮುಖಸೊಟ್ಟಮಾಡಿಕೊಳ್ಳದೆ ಉತ್ಸಾಹದಿಂದ ಮಾಡಿ ಮುಗಿಸುವ ಪ್ರಸನ್ನ ಭಾವದಿಂದ ಅಂದಿನ ವಿದ್ಯಾರ್ಥಿ ವೃಂದದಲ್ಲೆಲ್ಲ ಹೆಸರು ವಾಸಿಯಾಗಿದ್ದರು. ಮೇಲಾಗಿ ಸಿದ್ಧಗಂಗಾಕ್ಷೇತ್ರದ ಉತ್ತರಾಧಿಕಾರಿಗಳಾಗಿದ್ದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅತ್ಯಂತ ನಿಕಟವರ್ತಿಗಳೂ ಆಗಿದ್ದರು. ಶ್ರೀ ನಿರ್ವಾಣಮಹಾಸ್ವಾಮಿಗಳವರ ಸಂಕಲ್ಪ ದೊಡ್ಡದು. ಅವರ ಸಂಕಲ್ಪ ಉದ್ದಾನ ಶಿವಯೋಗಿಗಳವರ ಕೃಪಾಶೀರ್ವಾದ, ಕ್ಷೇತ್ರಾಧಿಪತಿ ಸಿದ್ಧಲಿಂಗೇಶ್ವರ ಕಾರುಣ್ಯ ಈ ಮುಪ್ಪರಿಗೆ ಕಾಳಪ್ಪನವರು ಬಂಧಿತರಾದರು. ಕಾಳಪ್ಪನವರ ಪೂರ್ವಜನ್ಮದ ವಾಸನೆ ದಗ್ಧಗೊಂಡಿತು. ಉದ್ದಾನ ಶಿವಯೋಗಿಗಳು ತಮ್ಮ ಕಾರುಣ್ಯವನ್ನು ಅವರ ಮೇಲೆರೆದು ಚರಿತ್ರಾರ್ಹ ಕನಕಪುರದ ದೇಗುಲಮಠಕ್ಕೆ ತಕ್ಕ ಉತ್ತಾರಾಧಿಕಾರಿಗಳೆಂದು ಗುರುತಿಸಿ, 'ಆಗಲಿ, ನಮ್ಮ ಕಾಳಪ್ಪನವರನ್ನು ನಿರಂಜನ ಪ್ರಣವ ಸ್ವರೂಪಿ ನಿರ್ವಾಣ ಮಹಾಸ್ವಾಮಿಗಳವರ ಶಿಷ್ಯರನ್ನಾಗಿ ಕಳಿಸಿಕೊಡುತ್ತೇವೆ' ಎಂದು ಆಶೀರ್ವಾದ ಮಾಡಿದರು. ಈ ವಿಷಯವನ್ನು ಕಾಳಪ್ಪನವರಲ್ಲಿ ಉದ್ದಾನ ಸ್ವಾಮಿಗಳು ಪ್ರಕಟಿಸಿದಾಗ ಕಾಳಪ್ಪನವರ ಮೈಸ್ವಲ್ಪ ಸಮಯ ಜುಮ್ಮೆಂದು ಅಲ್ಲಾಡಿ, ಸ್ವಲ್ಪ ಸಮಯದ ನಂತರ ಯಥಾಸ್ಥಿತಿಗೆ ಬಂದವರಾಗಿ ಶಿವಯೋಗಿ ಕೃಪೆಯಿದ್ದ ಹಾಗಾಗಲಿ. ನಾನು ಯಾವುದರಲ್ಲೂ ಸ್ವತಂತ್ರನಲ್ಲ. ತಮ್ಮ ಆಜ್ಞಾಧಾರಕನಾಗಿ, ವ್ಯವಹರಿಸುವುದೇ ನನ್ನ ಪರಮ ಕರ್ತವ್ಯವೆಂದು ಸಾಷ್ಟಾಂಗ ಪ್ರಣಾಮ ಮಾಡಿದರು. ಶ್ರೀ ಸಿದ್ಧಗಂಗೆಯ ವಟು ಕಾಳಪ್ಪನವರು ಶ್ರೀ ನಿರ್ವಾಣ ಮಹಾಸ್ವಾಮಿಗಳ ಕರಕಂಜಸಂಜಾತರೆನಿಸಿ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಮಹಾಲಿಂಗಸ್ವಾಮಿಗಳೆಂಬ ನೂತನ ನಾಮಾಂಕಿತದಿಂದ ಕನಕಪುರ ದೇಗುಲಮಠದ ಉತ್ತರಾಧಿಕಾರಿಗಳಾದರು. ಮಹಾಲಿಂಗಸ್ವಾಮಿ ದೇಗುಲಮಠಕ್ಕೆ ಬಂದುದೇ ತಡ. ನಿರ್ವಾಣ ಮಹಾಸ್ವಾಮಿಗಳವರಿಗೆ ಅಪರಿಮಿತ ಆನಂದ ಉಂಟಾಯಿತು. ಏಕಕಾಲದಲ್ಲಿ ಸಹಸ್ರ ಬಾಹುಬಲ ಬಂದ ಹಾಗಾಯಿತು. ಕನಕಪುರ ದೇಗುಲಮಠದ ಭಾಗ್ಯದ ಬಾಗಿಲು ತೆರೆಯಿತು.

ಉದ್ದಾನ ಶಿವಯೋಗಿಗಳ ಸಂಕಲ್ಪಶಕ್ತಿ, ಅನುಗ್ರಹ ಸಾಮರ್ಥ್ಯ ಬಹು ಎತ್ತರ ಮಟ್ಟದ್ದು. ಮಹಾಶಿವಯೋಗಿಯ ಅನುಗ್ರಹ ಮೂರು ತೆರನಾದುದು : ಸಂಕಲ್ಪ ಮಾತ್ರದಿಂದ, ದೃಷ್ಟಿಪಾತದಿಂದ, ಸ್ಪರ್ಶದಿಂದ. ಈ ಮೂರು ತೆರನಾದ ಅನುಗ್ರಹವನ್ನು ಬೀರಿ ಶಿವಯೋಗಿಗಳು ಅಸಂಖ್ಯಾತ ಶುದ್ಧಜೀವಿಗಳನ್ನು ಪವಿತ್ರಾತ್ಮರನ್ನಾಗಿಸಿದ್ದಾರೆ; ತೇಜೋಮಯರನ್ನಾಗಿಸಿದ್ದಾರೆ; ಓಜೋಮಯರನ್ನಾಗಿಸಿದ್ದಾರೆ. ಮುಖ್ಯವಾಗಿ ಒಂದು ಘಟನೆ : ತಮ್ಮ ಉತ್ತರಾಧಿಕಾರಿಯ ಬಗೆಗೆ ಶಿವಯೋಗಿಗಳು ಸಂಕಲ್ಪಿಸಿದಾಗ ಅದು ಬೆಂಗಳೂರಿನ ತೋಟದಪ್ಪ ವಿದ್ಯಾರ್ಥಿ ನಿಲಯದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ 'ಶಿವಪ್ಪ' ಎಂಬ ಹೆಸರಿನ ವಿದ್ಯಾರ್ಥಿಯ ಮೇಲೆ ಹರದು ಹೋಗಿ ಆ ಶಿವಪ್ಪನವರನ್ನು







ಅದಮ್ಯ, ಅನಿರ್ವಚನೀಯ ಆಕರ್ಷಣೆಗೊಳಗು ಮಾಡಿ ಮಠಕ್ಕೆಳೆತಂದ ಅವರ ಸಂಕಲ್ಪಶಕ್ತಿಯ ಪ್ರಬಲಶಕ್ತಿಯ ಒಂದು ಸನ್ನಿವೇಶವನ್ನು ನೆನದರೇ ಸಾಕು, ಮೈ ನವಿರೇಳುತ್ತದೆ. ಶಿವಪ್ಪನವರು ತುಮಕೂರಿನಲ್ಲಿ ಕೆಳಗಿನ ತರಗತಿಗಳಲ್ಲಿ ಓದುತ್ತಿದ್ದಾಗ ಶ್ರೀಮಠದಲ್ಲಿ ಆಶನವಸತಿಗಾಗಿ ಪ್ರಾರ್ಥಿಸಿಕೊಂಡಿದ್ದ ಪ್ರಾರ್ಥನೆ ಶಿವಯೋಗಿಗಳಿಂದ ತಿರಸ್ಕೃತವಾಗಿತ್ತು. ಆದರೂ ಶಿವಪ್ಪನವರಿಗೆ ಉದ್ದಾನೇಶ್ವರರಲ್ಲಿ ಅನಿರ್ವಚನೀಯ ಶ್ರದ್ಧಾಭಕ್ತಿ ವಿಶ್ವಾಸಮಯ ಭಾವಬಂಧುರತೆಯಿತ್ತು. ಆದರೆ, ಶಿವಪ್ಪನವರಿಗೆ ಮುಂದೆ ತಾವು ಈ ಮಠದ ಆಧಿಪತ್ಯ ವಹಿಸಿಕೊಳ್ಳತಕ್ಕವರೆಂಬ ಭಾವ ಕನಸು ಮನಸ್ಸಿನಲ್ಲೂ ಸುಳಿದಿದ್ದಿಲ್ಲ. ಅದಕ್ಕಾಗಿ ಶಿವಪ್ಪ ಮೊದಲಿನಿಂದ ಸಿದ್ಧವಾದವರೂ ಅಲ್ಲ. ಉದ್ದಾನೇಶ್ವರರ ಸಂಕಲ್ಪಶಕ್ತಿ ಅವರನ್ನು ಮಠಕ್ಕೆ ಬಂಧಿಸಿ ಎಳೆತಂದಿತು. ಅವರ ಸುತ್ತಮುತ್ತ ಬಿಗಿದಿದ್ದ ಶಾರೀರಿಕ; ಮಾನಸಿಕ, ಲೌಕಿಕ ಕಾಮನೆಗಳ ಬಂಧುರ ಹಗ್ಗಗಳು ಶಿವಯೋಗಿಯ ಅಗ್ನಿನೇತ್ರದಿಂದ ದಗ್ಧವಾಗಿ ಪೂರ್ವಾಶ್ರಯ ನಷ್ಟವಾಯಿತು. ಗುರುಪುತ್ರರಾದರೂ ಅದೊಂದು ಅಪೂರ್ವಘಟನೆ; ರೋಮಾಂಚಕಾರ ಘಟನೆ. ತಮ್ಮ ಪೂಜ್ಯ ಗುರುಗಳ ಸಂಕಲ್ಪಗಳನ್ನೆಲ್ಲ ಶತಾಧಿಕ ಸಹಸ್ರಾಧಿಕಗೊಳಿಸುತ್ತಿರುವುದು ಮಾನುಷ ಪ್ರಯತ್ನ ಲಕ್ಷ್ಯಗಳಲ್ಲ. ಅಗೋಚರ, ಅದ್ಭುತ, ಮಹಾಶಕ್ತಿಯ ಅನುಗ್ರಹದಿಂದ ಮಾತ್ರ ನಡೆಯತಕ್ಕ ಪ್ರಸಂಗಗಳಿಗೆ ಲಕ್ಷ್ಯ.

ಹೀಗೆ ಉದ್ದಾನ ಶಿವಯೋಗಿಗಳು ತ್ರಿವಿಧದಾಸೋಹಿಗಳಾಗಿ, ಸುಮಾರು ಎಂಭತ್ತು ವರ್ಷಗಳಷ್ಟು ದೀರ್ಘಕಾಲ ಶ್ರೀ ಸಿದ್ಧಗಂಗಾ ಪುಣ್ಯಕ್ಷೇತ್ರಾಧಿಪತಿಗಳಾಗಿ ಎಸಗಿದ ದಾಸೋಹವ್ರತ ಭಾರತ ಮಠಗಳ ಚರಿತ್ರೆಯಲ್ಲಿ ಅಗ್ರಸ್ಥಾನಾಪನ್ನ ವಾಗಿ ನಿಲ್ಲಬಲ್ಲ ಅಂತಃಸ್ಸತ್ವದಿಂದ ಕೂಡಿದ್ದಾಗಿದೆ. ಅವರ ಅಗಾಧ ಸಂಕಲ್ಪಗಳೇ ಇಂದು ಬೃಹದಾಕಾರದಲ್ಲಿ ಅವರ ಕರಕಂಜಸಂಜಾತರಾದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಜರುಗುತ್ತಿವೆ. ಶ್ರೀಕ್ಷೇತ್ರ ಸಂಸ್ಥಾನ ಮಠವಲ್ಲ; ದೊಡ್ಡ ಆಸ್ತಿಪಾಸ್ತಿಗಳಿಲ್ಲದ್ದು; ಆದರೆ ನಡೆಯುವ ಅದ್ಭುತ ಶಿವಯೋಗಿಯ ಸಂಕಲ್ಪಶಕ್ತಿಯ ಪ್ರಾಬಲ್ಯದ್ದು; ಜೋಳಿಗೆಯ ಬಲದ್ದು. ಬೇಡದ ಗುರು ಬೇಡಿಸಿಕೊಳ್ಳದ ಭಕ್ತ ವಿಶೇಷ ಬಂಧನದ್ದು. ಆ ಕ್ಷೇತ್ರದ ನಡೆನುಡಿಗಳು ರುಚಿ-ಶುಚಿಯುಳ್ಳದ್ದು; ಶುದ್ಧ ಸಿದ್ಧಿಗಳುಳ್ಳದ್ದು. ಅಂತೆಯೇ ಅಲ್ಲಿಯದೆಲ್ಲ ಲೋಕಕ್ಕೆ ಅದ್ಭುತ! ಆಶ್ಚರ್ಯ! ಪುಳಕಗೊಳಿಸುವಂತಹುದು. ಶ್ರೀಮಠಕ್ಕೆ ಮಾತ್ರ ಸಹಜಚರ್ಯೆ ಅಷ್ಟೆ.

> **ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ, ಹಿಡಿದಿರ್ದ ಲಿಂಗವು ಘಟಸರ್ಪನಂತೆ! ನುಡಿಯಲು ಬಾರದು, ನಡೆಯಲು ಬಾರದು. ಲಿಂಗ ದೇವನೆ ದಿವ್ಯವೊ ಅಯ್ಯಾ! ಬಡವನ ಕೋಪ ಅವುಡಿಗೆ ಮೃತ್ಯುವಾದಂತೆ, ಕಡೆದಾಂಟದು ಕಾಣಾ ಕೂಡಲಸಂಗಮದೇವಾ.**
>
> **-- ಬಸವಣ್ಣ**

## ಶ್ರೀ ಸಿದ್ಧಗಂಗಾ ಕರುಣ ತ್ರಿವಿಧಿ

ವೈರಾಗ್ಯ ಶಿಖರವೆ ಹರಸಿ ಕರೆತಂದಿರಲು
ಶರಣ ಸಂಪದವಾಗಿ ಅರಳಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * * *

ಉದ್ದಾನ ಗುರುವರನ ಕಠಿನ ಕಮ್ಮಟದಲ್ಲಿ
ಸಿದ್ಧ ಶಿವಹೊನ್ನಾಗಿ ಅರಳಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * * *

''ಸತ್ಯ ಸಾಕ್ಷಾತ್ಕಾರ ಸ್ಥಿತಪ್ರಜ್ಞ ಮಂದಾರ
ಸಾಹಿತ್ಯ ಸೌಂದರ್ಯ'' ಶಿವನಿಧಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ।

**- ಹೆಚ್.ವಿ. ವೀರಭದ್ರಯ್ಯ**

## ವಚನಗಳು

ನುಡಿದರೆ ಕತ್ತಲೆ ಝಾಡಿಸಿ ಒದ್ದಂತೆ
ನುಡಿದರೆ ಕರುರೊಳಗೆ ಅಲಗಿಕ್ಕಿತಿರುವಿದಂತೆ
ನುಡಿದರೆ ಕಿವಿಯಲಿ ಕಾದ ಸೀಸ ಸುರಿದಂತೆ
ನುಡಿವ ಈ ಕೊಂಕು ಜಗದಿಂದ ಪಾರುಗಾಣಿಸೋ
ಶ್ರೀಮನ್ನಿರಂಜನಕಾರದ ಪ್ರಭುವೆ ॥೧॥

ನಗುತಿರಲು ಕರುಬುವುದೀಜಗ
ಅಳುತಿರಲು ನಗುವುದೀಜಗ
ನಗೆ ಬಂದಾಗ ಬೀಗದ, ಅಳುಬಂದಾಗ ಕುಗ್ಗದ
ಸಮತೆಯ ಬದುಕ ಸಾಗಿಸಲು ಕಲಿಸೋ
ಶ್ರೀಮನ್ನಿರಂಜನಕಾರದ ಪ್ರಭುವೆ ॥೨॥

ನನ್ನಿಚ್ಛೆಯಲಿ ನಡೆವೆನೆಂದರೆ
ನನ್ನಿಚ್ಛೆಗೆ ಇಂಬಿಲ್ಲ;
ನಿನ್ನಿಚ್ಛೆಯಲಿ ನಡೆವೆನೆಂದರೆ
ನಿನ್ನಿಚ್ಛೆ ನನಗೆ ತಿಳಿದಿಲ್ಲ;
ನನ್ನ-ನಿನ್ನಿಚ್ಛೆಗಳಲಿ
ತೊಳಲಿಸಿ-ಬಳಲಿಸಿ
ನಗುವೆಯೇಕೆಲೆತಂದೆ
ಶ್ರೀಮನ್ನಿರಂಜನಕಾರದ ಪ್ರಭುವೆ ॥೩॥

**– ಪ್ರೊ. ಆರ್. ರಾಚಪ್ಪ**

ಶ್ರೇಷ್ಠ ಸಂಶೋಧಕ, ವಿಮರ್ಶಕ, ವಿದ್ವಾಂಸ

## ಡಾ|| ಎಂ. ಎಂ. ಕಲಬುರ್ಗಿ ಅವರಿಗೆ

### ಪಂಪ ಪ್ರಶಸ್ತಿ



ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ಸಲ್ಲಿಸಿದ ಗಣನೀಯ ಸೇವೆಗಾಗಿ ಡಾ. ಎಂ.ಎಂ. ಕಲಬುರ್ಗಿ ಅವರಿಗೆ ರಾಜ್ಯ ಸರ್ಕಾರ ಈ ಸಾಲಿನ ಪ್ರತಿಷ್ಠಿತ ಪಂಪ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಪ್ರಶಸ್ತಿ ಒಂದು ಲಕ್ಷ ರೂ. ನಗದು ಬಹುಮಾನವನ್ನು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿದೆ.

ಖ್ಯಾತ ಸಂಶೋಧಕರಾದ ಡಾ. ಎಂ.ಎಂ. ಕಲಬುರ್ಗಿ ಅವರು ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಪ್ರಥಮ ರ್‍ಯಾಂಕ್‌ನೊಂದಿಗೆ ಕನ್ನಡ ಎಂ.ಎ. ಪದವಿಯನ್ನು ಪಡೆದ ಪ್ರತಿಭಾವಂತರು. ಇವರು ಬರೆದ 'ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ' ಮಹಾಪ್ರಬಂಧಕ್ಕೆ ಡಾಕ್ಟರೇಟ್ ಪದವಿ ದೊರೆತಿದೆ. 'ಶಾಸನ ಸಂಪದ', 'ಶಾಸನಗಳಲ್ಲಿ ಶಿವಶರಣರು', 'ಶಾಸನ ವ್ಯಾಸಂಗ', 'ಶಬ್ದಮಣಿದರ್ಪಣ ಸಂಗ್ರಹ' ಐತಿಹಾಸಿಕ, ಮಾರ್ಗ (ಎರಡು ಸಂಪುಟಗಳು), ಮಲ್ಲಿನಾಥ ಪುರಾಣ ಸಂಗ್ರಹ ಮುಂತಾದ ೧೧ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ಅವರ ಇತ್ತೀಚಿನ 'ಮಾರ್ಗ' ಸಂಶೋಧನಾ ಗ್ರಂಥಕ್ಕೆ ೧೯೮೮ರ ವಿಶೇಷ ಪುರಸ್ಕಾರ ದೊರೆತಿದೆಯಲ್ಲದೆ, ವಿಮರ್ಶಕರ ಗಮನ ಸೆಳೆದ ಪ್ರೌಢ ಗ್ರಂಥವಾಗಿದೆ. 'ಶಾಸನಗಳಲ್ಲಿ ಶಿವಶರಣರು' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ. ಶ್ರೀ ಜಯಚಾಮರಾಜ ಒಡೆಯರ ಪಾರಿತೋಷಕವನ್ನೂ ಪಡೆದಿರುವ ಡಾ. ಕಲಬುರ್ಗಿ ಅವರು ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯದರ್ಶಿಯಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

'ಸಿದ್ಧಗಂಗಾ' ಪತ್ರಿಕಾ ಬಳಗ ಡಾ.ಎಂ.ಎಂ. ಕಲಬುರ್ಗಿ ಅವರಿಗೆ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.



ಶ್ರೇಷ್ಠ ವಿದ್ವಾಂಸ, ಸಂಶೋಧಕ, ಕನ್ನಡ ಸೇನಾನಿ

## ಡಾ|| ಎಂ. ಚಿದಾನಂದಮೂರ್ತಿ ಅವರಿಗೆ

### ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ



ಡಾ. ಎಂ. ಚಿದಾನಂದಮೂರ್ತಿ ಅವರಿಗೆ ಅವರ 'ಹೊಸತು ಹೊಸತು' ಪ್ರಬಂಧ ಸಂಗ್ರಹಕ್ಕೆ ಈ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ. ಈ ಪ್ರಶಸ್ತಿ ತಾಮ್ರದ ಫಲಕ ಹಾಗೂ 25,000 ರೂ.ಗಳ ನಗದನ್ನು ಒಳಗೊಂಡಿದೆ.

ಶ್ರೇಷ್ಠ ಸಂಶೋಧಕರೂ, ವಿದ್ವಾಂಸಕರೂ, ಭಾಷಾತಜ್ಞರೂ ಆದ ಡಾ. ಎಂ. ಚಿದಾನಂದಮೂರ್ತಿಯವರು ''ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ''ಶೂನ್ಯ ಸಂಪಾದನೆಯನ್ನು ಕುರಿತು'', ''ಭಾಷಾ ವಿಜ್ಞಾನದ ಮೂಲ ತತ್ವಗಳು'',. ''ಗ್ರಾಮೀಣ'', ''ಸಂಶೋಧನ ತರಂಗ'', ''ಬಸವಣ್ಣನವರು'', ''ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ'' ಇತ್ಯಾದಿ 17ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. 250ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳನ್ನು ಬರೆದಿದ್ದಾರೆ. ''ಕನ್ನಡ ಸಂಸ್ಕೃತಿ - ನಮ್ಮ ಹೆಮ್ಮೆ'' ಒಂಭತ್ತು ಭಾಷೆಗಳಿಗೆ ಅನುವಾದವಾಗಿದೆ. ಐವತ್ತಕ್ಕೂ ಹೆಚ್ಚು ರಾಷ್ಟ್ರೀಯ, ಅಂತರಾಷ್ಟ್ರೀಯ ಸಮ್ಮೇಳನಗಳು, ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿದ ಹೆಗ್ಗಳಿಕೆ ಇವರದು. ಆರು ಕೃತಿಗಳಿಗೆ ಬಹುಮಾನ ಬಂದಿದೆ. ಅಮೇರಿಕಾದ ಚಿಕಾಗೋ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದ್ದಾರೆ. ಕನ್ನಡ ಚಳುವಳಿಯಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಡಾ. ಮೂರ್ತಿ ಅವರು ಕನ್ನಡ ಶಕ್ತಿ ಕೇಂದ್ರದ ಕಾರ್ಯಾಧ್ಯಕ್ಷರಾಗಿದ್ದಾರೆ. ಸಂಶೋಧನಾ ಕ್ಷೇತ್ರದಲ್ಲಿ ಸಲ್ಲಿಸಿದ ಗಣನೀಯ ಸೇವೆಗಾಗಿ ರಾಜ್ಯೋತ್ಸವ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರಶಸ್ತಿಗಳನ್ನು ಪಡೆದ ಗೌರವ ಇವರದು. ಕನ್ನಡ ನಿಘಂಟು ಸಂಪಾದಕ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಸಿದ್ಧಗಂಗಾ ಪತ್ರಿಕಾ ಬಳಗ ಡಾ. ಎಂ. ಚಿದಾನಂದ ಮೂರ್ತಿ ಅವರಿಗೆ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.









# ಶರಣರು ಮತ್ತು ದಲಿತ ಪ್ರಜ್ಞೆ

– ಡಾ. ಜಿ.ಎಸ್. ಶಿವರುದ್ರಪ್ಪ
ಪ್ರಸಿದ್ಧ ಕವಿಗಳು ಹಾಗೂ ವಿಮರ್ಶಕರು,
ಬೆಂಗಳೂರು

ದಲಿತ ಎಂದರೆ ಮೇಲಿನ ವರ್ಗದವರಿಂದ ತುಳಿತಕ್ಕೆ ಅಥವಾ ಶೋಷಣೆಗೆ ಒಳಗಾದವರು, ಅಕ್ಷರಜ್ಞಾನದ ಸವಲತ್ತುಗಳಿಂದ ವಂಚಿತರಾದವರು; ಸಾಮಾಜಿಕವಾದ ಸ್ಥಾನಮಾನಗಳಿಂದ ನಿರಾಕರಿಸಲ್ಪಟ್ಟವರು; ಅಮಾನವೀಯವಾದ ರೀತಿಯಲ್ಲಿ ಮಾನಸಿಕ ಹಿಂಸೆಗೆ ಒಳಗಾದವರು. ಇವರು ಎಲ್ಲ ದೇಶಗಳಲ್ಲಿಯೂ, ಎಲ್ಲ ಕಾಲದಲ್ಲಿಯೂ ಇದ್ದವರು ಮತ್ತು ಈಗಲೂ ಇರುವವರು. ಆದರೆ, ಈ ದಲಿತ ವರ್ಗ ಹಿಂದೆ ಇದ್ದ ಆ ಸ್ಥಿತಿಯನ್ನು ಕೊಂಚಮಟ್ಟಿಗೆ ದಾಟಿ ಹೊಸ ಎಚ್ಚರಗಳಿಗೆ ತಮ್ಮನ್ನು ತೆರೆದುಕೊಂಡಿದ್ದಾರೆ ಮತ್ತು ಸ್ವಾಭಿಮಾನದಿಂದ ಶೋಷಕ ಶಕ್ತಿಗಳ ವಿರುದ್ಧವಾಗಿ ಪ್ರತಿಭಟಿಸಿ ನಿಲ್ಲಬಲ್ಲವರಾಗಿದ್ದಾರೆ ಎನ್ನುವುದು ಚಾರಿತ್ರಿಕವಾಗಿ ಬಹುಮುಖ್ಯವಾದ ಸಂಗತಿಯಾಗಿದೆ. ಅವರ ಈ ಎಚ್ಚರಕ್ಕೆ ಹಿನ್ನೆಲೆಯಾಗಿ ಜಗತ್ತಿನ ಚರಿತ್ರೆಯಲ್ಲಿ, ಅನೇಕ ಬಗೆಯ ಸಾಮಾಜಿಕ ಹಾಗೂ ರಾಜಕೀಯ ಆಂದೋಲನಗಳನ್ನು ಕಾಣಬಹುದಾದರೂ, ಈ ವರ್ಗಕ್ಕೆ ಒಂದು ಆತ್ಮಪ್ರತ್ಯಯವನ್ನೂ, ಪ್ರತಿಭಟನೆಯ ದನಿಯನ್ನೂ, ಸಮಾನತೆಯ ನೆಲೆಯನ್ನೂ ಹನ್ನೆರಡನೆಯ ಶತಮಾನದಷ್ಟು ಹಿಂದೆಯೇ ಕರ್ನಾಟಕದಲ್ಲಿ ನಡೆದ ಶರಣ ಚಳುವಳಿ ಗಳಿಸಿಕೊಟ್ಟಿತೆಂಬುದು ತುಂಬ ಮಹತ್ವದ ಘಟನೆಯಾಗಿದೆ.

### ಶರಣ ಚಳುವಳಿ

ವಾಸ್ತವವಾಗಿ ನಾವು ಯಾವುದನ್ನು ಶರಣ ಚಳುವಳಿ ಎಂದು ಕರೆಯುತ್ತೇವೆಯೋ ಅದು, ಭಾರತದ ಮೊಟ್ಟ ಮೊದಲ ಜನತಾ ಚಳುವಳಿ. ಈ ಚಳುವಳಿಯಲ್ಲಿ ಪಾಲುಗೊಂಡವರು ಕನ್ನಡನಾಡಿನ ಶ್ರೀ ಸಾಮಾನ್ಯರು; ಅದರಲ್ಲಿಯೂ ಕೃಷಿಕರು ಮತ್ತು ಕಸುಬುದಾರರು. ಮತ್ತು ಈ ಬಹುಮಟ್ಟಿನ ಅನಕ್ಷರಸ್ಥರನ್ನು, ಈ ಚಳುವಳಿಯೊಳಕ್ಕೆ ಸಂಘಟಿಸಿದವರು, ಅದೇ ಸಮಾಜದ ಮೇಲು ವರ್ಗದಿಂದ ಬಂದ ಬಸವಣ್ಣನವರು. ಅಲ್ಲದೆ ಈ ಚಳುವಳಿ, ಮೂಲಭೂತವಾಗಿ ಸಾಮಾಜಿಕ-ಧಾರ್ಮಿಕ ಸ್ವರೂಪದ್ದು. ಯಾವ ಒಂದು ಧಾರ್ಮಿಕ ನಿಲುವು, ವರ್ಣವರ್ಗಗಳ ತರತಮಗಳನ್ನು ನಿರಾಕರಿಸಿ, ಶರಣರಾಗಿರುವುದು ಅಥವಾ ಶಿವಭಕ್ತನಾಗಿರುವುದು-ಎಲ್ಲಕ್ಕಿಂತ ಮಹತ್ವದ್ದು ಎಂಬುದನ್ನು ಪ್ರತಿಪಾದಿಸಿತೋ ಆ ನೆಲೆಯಲ್ಲಿ ಅಂದಿನ ಸಮಾಜ ತನ್ನೆಲ್ಲ ಕೀಳರಿಮೆಗಳಿಂದ, ಭಯಗಳಿಂದ, ಅವೈಚಾರಿಕತೆಗಳಿಂದ ಬಿಡುಗಡೆಯನ್ನು ಪಡೆದುಕೊಂಡಿತು. ಈ ಬಿಡುಗಡೆಯಲ್ಲಿ ಪಾಲುಗೊಂಡವರಲ್ಲಿ ಸಮಾಜದ ಮೇಲ್‌ಸ್ತರದವರ ಜತೆಗೆ, ಅದರ ಕೆಳಗಿನ ಸ್ತರದವರು ಅಥವಾ ಇವತ್ತಿನ ಪರಿಭಾಷೆಯಲ್ಲಿ ಹೇಳುವುದಾದರೆ ದಲಿತರೂ ಇದ್ದಾರೆ.

ಯಾವ ಸಾಮಾಜಿಕ ಸಂದರ್ಭದಲ್ಲಿ ಶರಣ ಚಳುವಳಿ ನಡೆಯಿತೋ ಆ ಸಮಾಜ ಮೂಲಭೂತವಾಗಿ ಸ್ಥಗಿತಗೊಂಡ ಅಥವಾ ಸ್ಥಾವರಸ್ವರೂಪದ ಸಮಾಜ. ಈ ಸ್ಥಗಿತತೆಗೆ ಕಾರಣ ಬಹುಕಾಲದಿಂದ ಬಂದ ವರ್ಣವ್ಯವಸ್ಥೆಯೇ ಆಗಿದೆ. ಪುರುಷ ಸೂಕ್ತದ ಪ್ರತಿಮೆಯಲ್ಲಿ ಉಕ್ತವಾಗಿರುವ ಸಮಾಜದ ಶ್ರೇಣೀಕರಣದಲ್ಲಿ ಬ್ರಾಹ್ಮಣನಿಗೆ ಉಚ್ಚ ಸ್ಥಾನವೂ, ಶೂದ್ರನಿಗೆ ಕನಿಷ್ಠ ಸ್ಥಾನವೂ ನೀಡಲ್ಪಟ್ಟಿದೆ. ಸಮಾಜದ ಮೇಲಿನ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಈ ಮೂರೂ ವರ್ಣಗಳವರು, ಸಮಾಜದ ಬಹು ಸಂಖ್ಯಾತ ದುಡಿಯುವ ವರ್ಗದವರಾದ ಶೂದ್ರರನ್ನು ವ್ಯವಸ್ಥಿತವಾಗಿ ಶೋಷಣೆಗೆ ಗುರಿಪಡಿಸುತ್ತಲೇ ಬಂದಿದ್ದಾರೆ. ಮತ್ತು ನಾಲ್ಕು ವರ್ಣಗಳ ಜತೆಗೆ ಐದನೆಯದಾದ **'ಪಂಚಮ'** ಎಂದು ಕರೆಯಲ್ಪಡುವ ಅಸ್ಪೃಶ್ಯ ಸಮುದಾಯವೊಂದು ನಿರ್ಮಿತವಾಗಿ ಮೇಲಿನ ನಾಲ್ಕೂ ವರ್ಣಗಳವರಿಂದ ತಿರಸ್ಕಾರಕ್ಕೆ, ಶೋಷಣೆಗೆ ಗುರಿಯಾಗುತ್ತಾ ಬಂದಿದೆ. ಶೂದ್ರರು ಈ ಶ್ರೇಣೀಕರಣದಲ್ಲಿ 'ಕನಿಷ್ಠ'ರಾದರೆ, ಈ ಪಂಚಮರು ಅಥವಾ ಅಸ್ಪೃಶ್ಯರು ಅಥವಾ ಹೆಸರು ಹೇಳಲೂ ಅನರ್ಹರೆಂಬುದನ್ನು ಸೂಚಿಸುವ **'ಅನಾಮಿಕರು'**, **'ಕನಿಷ್ಠತಮ'**ರೆಂದು ಹೇಳಬಹುದು. ಹೀಗಾಗಿ ಅಂದಿನ ಸಾಮಾಜಿಕ ವ್ಯವಸ್ಥೆ ಎನ್ನುವುದು

**ಶರಣ ಚಳುವಳಿ ಭಾರತದ ಮೊಟ್ಟ ಮೊದಲ ಜನತಾ ಚಳುವಳಿ. ಈ ಚಳುವಳಿಯಲ್ಲಿ ಪಾಲುಗೊಂಡವರು ಕನ್ನಡನಾಡಿನ ಶ್ರೀ ಸಾಮಾನ್ಯರು; ಅದರಲ್ಲಿಯೂ ಕೃಷಿಕರು ಮತ್ತು ಕಸುಬುದಾರರು. ಈ ಬಹುಮಟ್ಟಿನ ಅನಕ್ಷರಸ್ಥರನ್ನು, ಈ ಚಳುವಳಿಯೊಳಕ್ಕೆ ಸಂಘಟಿಸಿದವರು, ಅದೇ ಸಮಾಜದ ಮೇಲು ವರ್ಗದಿಂದ ಬಂದ ಬಸವಣ್ಣನವರು. ಶರಣ ಚಳುವಳಿಯ ಈ ಹೊಸ ಧಾರ್ಮಿಕ ನಿಲುವುಗಳಲ್ಲಿ ಅಂದಿನ ಬಹುಸಂಖ್ಯಾತ ದಲಿತರು ತಮ್ಮ ಹೊಸ ಹುಟ್ಟುಗಳನ್ನು ಪಡೆದುಕೊಂಡರು. ತುಂಬ ಧೈರ್ಯದಿಂದ ಸಾಂಪ್ರದಾಯಿಕವಾದ ನಂಬಿಕೆಗಳನ್ನು ಆಚಾರ ವಿಚಾರಗಳನ್ನು ಪ್ರಶ್ನೆ ಮಾಡಿದರು. ತಮ್ಮ ತಮ್ಮ ವೃತ್ತಿಗಳ ಮೂಲಕ ಬಂದ ಕೀಳರಿಮೆಗಳನ್ನು ಕಳೆದುಕೊಂಡು 'ಕಾಯಕ ಜೀವಿ'ಗಳಾದರು. ಮತ್ತು ತಮ್ಮ ತಮ್ಮ ಅಂತರಂಗದ ಅನುಭವಗಳನ್ನು ತಮ್ಮ ಕಾಯಕದ ಪ್ರತೀಕಗಳ ಮೂಲಕ ಅಭಿವ್ಯಕ್ತಿಸುವ ಸಾಮರ್ಥ್ಯವನ್ನು ಗಳಿಸಿಕೊಂಡರು.**

ಬ್ರಾಹ್ಮಣನ ಶ್ರೇಷ್ಠತ್ವವನ್ನೂ, ಅಸ್ಪೃಶ್ಯನ ಕನಿಷ್ಠತ್ವವನ್ನೂ ನಿರ್ವಿವಾದವಾಗಿ ಉಳಿಸಿಕೊಂಡ ವ್ಯವಸ್ಥೆಯಾಗಿತ್ತು.

ಹೀಗೆ **'ವಿಪ್ರ ಮೊದಲು ಅಂತ್ಯಜ ಕಡೆಯಾಗಿ'** ಉಳ್ಳ ಈ ವ್ಯವಸ್ಥೆಯನ್ನು ಸ್ವಲ್ಪವೂ ಕದಲಿಸದಂತೆ ಕಾಪಾಡಿಕೊಂಡು ಬರುವುದರಲ್ಲಿ ಪ್ರಭುಶಕ್ತಿ ಹಾಗೂ ಪುರೋಹಿತಷಾಹೀ ಪ್ರವೃತ್ತಿಗಳು - ತುಂಬ ದಕ್ಷತೆಯಿಂದ ವರ್ತಿಸಿದವು. ರಾಜರು-ಮಹಾಜನಗಳು-ಮಠಗಳು ಎಂಬ ತ್ರಿಕೂಟಗಳು ಈ ವ್ಯವಸ್ಥೆಯ ಮುಖ್ಯಶಕ್ತಿಗಳು. ರಾಜರು, ವರ್ಣ ವ್ಯವಸ್ಥೆಯನ್ನು, ಎಂದೂ ಬದಲಿಸದೆ, ಕದಲಿಸದೆ, 'ಮಹಾಜನಗಳಿಗೆ' ಎಂದರೆ ಬ್ರಾಹ್ಮಣರಿಗೆ, ಅವರ ಅಗ್ರಹಾರಗಳಿಗೆ, ಅವರು ಮಾಡುವ ಯಜ್ಞಯಾಗಾದಿಗಳಿಗೆ,ಅವರ ಪೌರೋಹಿತ್ಯದಲ್ಲಿದ್ದ ದೇವಸ್ಥಾನಗಳಿಗೆ ದಾನ-ದಕ್ಷಿಣೆ-ದತ್ತಿಗಳನ್ನು ಕೊಟ್ಟು ಅವರ ಆಶೀರ್ವಾದವನ್ನು ಪಡೆಯುತ್ತ, ಶೈವ ಹಾಗೂ ಕಾಳಾ ಮುಖ ಗುರುಗಳು ನಡೆಯಿಸುತ್ತಿದ್ದ ಅನೇಕ ಮಠಗಳಿಗೆ ರಕ್ಷಣೆ ಹಾಗೂ ಗೌರವವನ್ನೂ ಸಲ್ಲಿಸುತ್ತಾ, ಸಮಾಜದ ಇನ್ನಿತರ ವರ್ಣಗಳ ಯಾರ್‍ಯಾರು ಎಲ್ಲೆಲ್ಲಿ ಇರಬೇಕೋ ಅಲ್ಲಲ್ಲಿ ಇರಿಸುತ್ತಾ ಪ್ರಜಾಕ್ಷೇಮಚಿಂತನೆಯಲ್ಲಿ ತೊಡಗಿದ್ದರು. ಮಹಾಜನರು ಮತ್ತು ಮಠಗಳು, ಸಮಾಜದ ಇತರ ವರ್ಣಗಳವರನ್ನು ತಮ್ಮ ಲಾಭಕ್ಕೆ ದುಡಿಮೆಗೆ ಬಳಸಿಕೊಂಡು ತಮ್ಮ ಸುಖವನ್ನು ನೋಡಿಕೊಂಡರು. **'ಸರ್ವೇ ಜನಾಃ ಸುಖಿನೋ ಭವಂತು', 'ಸರ್ವಂ ಖಲಿದ್ವಂ ಬ್ರಹ್ಮ'** ಎಂಬ ಮಂತ್ರಗಳನ್ನು ಹೇಳುತ್ತಾ, ಸಾಮಾಜಿಕ ತರತಮಗಳನ್ನು ಯಥಾಸ್ಥಿತಿಯಲ್ಲಿರಿಸುವ ತಂತ್ರ ಅವ್ಯಾಹತವಾಗಿ ಈ ಸ್ಥಾವರ ಸಾಮಾಜಿಕ ಚೌಕಟ್ಟಿನಲ್ಲಿ ವ್ಯವಸ್ಥಿತವಾಗಿ ಮುಂದುವರಿದಿತ್ತು.

ಶರಣ ಚಳುವಳಿಯ ಕೇಂದ್ರ ವ್ಯಕ್ತಿಯಾದ ಬಸವಣ್ಣನವರು ಹುಟ್ಟಿದ್ದು ಇಂಥ ಸ್ಥಾವರ ಸಾಮಾಜಿಕ ವ್ಯವಸ್ಥೆಯಲ್ಲಿ. ಈ ವ್ಯವಸ್ಥೆಯನ್ನು ಕಂಡು ಕಸಿವಿಸಿಗೊಂಡ ಅವರು, ಅದನ್ನು ಬದಲಿಸಲು, ಸ್ಫೋಟಕ ಸಾಮಗ್ರಿಯನ್ನಾಗಿ ಬಳಸಿಕೊಂಡದ್ದು ಅಂದಿನ ವರ್ಣವ್ಯವಸ್ಥೆಯ ನಾಲ್ಕು ಐದನೆಯ ಹಂತದ ಜನಶಕ್ತಿಯನ್ನು 'ಅಂದರೆ ಶೂದ್ರ ಹಾಗೂ ಪಂಚಮ ವರ್ಣಗಳ ಶ್ರೀಸಾಮಾನ್ಯರನ್ನು; ಅವತ್ತು ವಿವಿಧ ವೃತ್ತಿಗಳಲ್ಲಿ ತೊಡಗಿದ ಕಸಬುದಾರರನ್ನು' ನಿರ್ಲಕ್ಷ್ಯಕ್ಕೆ ಒಳಗಾದ ಅಸ್ಪೃಶ್ಯರನ್ನು, ಅಲ್ಲಮ, ಸಿದ್ಧರಾಮ, ಚೆನ್ನಬಸವ, ಅಕ್ಕಮಹಾದೇವಿ ಇಂಥ ಕೆಲವರನ್ನು ಹೊರತುಪಡಿಸಿದರೆ, ಈ ಸಂಘಟನೆಯಲ್ಲಿ ಪಾಲುಗೊಂಡವರೆಲ್ಲ ಬಹುಮಟ್ಟಿಗೆ ಅಂದಿನ ಸಮಾಜದ ಕೆಳಗಿನ ಸ್ತರಗಳಿಂದ ಬಂದವರೇ; ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ, ಅಂಬಿಗರ ಚೌಡಯ್ಯ, ಕಿನ್ನರಿ ಬೊಮ್ಮಯ್ಯ, ಬಹುರೂಪೀ ಚೌಡಯ್ಯ, ತುರುಗಾಹಿ ರಾಮಣ್ಣ, ಕಾಮಾಟಿ(ಕೂಲಿ) ಭೀಮಣ್ಣ, ಕೀಲಾರದ (ಗೋಶಾಲೆಯ) ಭೀಮಣ್ಣ, ಗಾಣದ ಕಣ್ಣಪ್ಪ, ಡಕ್ಕೆಯ ಬೊಮ್ಮಣ್ಣ, ಮೇದರ ಕೇತಯ್ಯ, ಬೊಕ್ಕಸದ ಚಿಕ್ಕಣ್ಣ, ಸುಂಕದ ಬಂಕಣ್ಣ, ಒಕ್ಕಲಿಗರ ಮುದ್ದಣ್ಣ - ಈ ಹೆಸರುಗಳನ್ನು ನೋಡಿದರೆ, ಈ ಜನ ಅಂದಿನ ಸಮಾಜದ ಕೆಳವರ್ಗದವರಾಗಿದ್ದು ಅವರು ಕೈಕೊಂಡ ಕಸುಬುಗಳು ಯಾವುವು ಎನ್ನುವುದು ಸ್ಪಷ್ಟವಾಗುತ್ತದೆ. ಇವರಲ್ಲದೆ ಅಸ್ಪೃಶ್ಯ ಅಥವಾ ಪಂಚಮ ವರ್ಗದಿಂದ ಬಂದವರೂ ಸಾಕಷ್ಟಿದ್ದಾರೆ. ಸಂಬೋಳಿ ನಾಗಿದೇವ, ಮಾದಾರ ಚನ್ನಯ್ಯ, ಡೋಹರ (ಚರ್ಮ ಹದಮಾಡುವ) ಕಕ್ಕಯ್ಯ, ಮಾದರ ಧೂಳಯ್ಯ, ಅನಾಮಿಕ ಮಾಚಯ್ಯ, ಉರಿಲಿಂಗ ಪೆದ್ದಿ, ಕಾಳವ್ವೆ - ಈ ಕೆಲವರು ಅಸ್ಪೃಶ್ಯ ಜಾತಿಯಿಂದ ಬಂದವರು. ಇವರ ಜತೆಗೆ ಆಯ್ದಕ್ಕಿ ಲಕ್ಕಮ್ಮ ಲಿಂಗಮ್ಮ ಸತ್ಯಕ್ಕ, ಕದಿರ ರೆಮ್ಮವ್ವೆ, ಅಮುಗೆ ರಾಯಮ್ಮ ಕಾಯಕದ ರೇವಮ್ಮ ಕೊಟ್ಟಣದ ಸೋಮವ್ವೆ, ಸೂಳೆ ಸಂಕವ್ವೆ - ಮೊದಲಾದ ಸ್ತ್ರೀಯರೂ ಇದ್ದಾರೆ. ಇವರೆಲ್ಲರನ್ನು ಸ್ಥೂಲವಾಗಿ ದಲಿತರೆಂದೇ ನಿರ್ದೇಶಿಸಬಹುದು. ಯಾಕೆಂದರೆ ಇವರೆಲ್ಲರೂ ಅಂದಿನ ಸಮಾಜದ ಮೇಲುವರ್ಗದವರಿಂದ ಶೋಷಣೆಗೆ ಒಳಗಾದವರು; ಮೇಲುವರ್ಗದವರಿಗಾಗಿ ವಿವಿಧ ವೃತ್ತಿಗಳ ಮೂಲಕ ದುಡಿಯುತ್ತಾ, ಎಲ್ಲಾ ಬಗೆಯ ಸವಲತ್ತುಗಳಿಂದ ವಂಚಿತರಾಗುತ್ತಾ, ದುಃಖ-ಅವಮಾನಗಳಲ್ಲಿ ತಮ್ಮ ವ್ಯಕ್ತಿತ್ವವನ್ನೇ ಕಳೆದು ಕೊಂಡು ಕೊರಗುತ್ತ ಇದ್ದವರು.

**ಅಭಿವ್ಯಕ್ತಿ ಸ್ವಾತಂತ್ರ್ಯ**

ಇಂಥ ಒಂದು ಬಹುಸಂಖ್ಯಾತ ಶೋಷಿತ ಸಮುದಾಯಕ್ಕೆ ಒಂದು ವ್ಯಕ್ತಿತ್ವವನ್ನೂ, ವಿಚಾರ ಮಾಡುವ ಅವಕಾಶವನ್ನೂ ಹಾಗೂ ಅಭಿವ್ಯಕ್ತಿಯ ಸ್ವಾತಂತ್ರ್ಯವನ್ನೂ ಮತ್ತು ಆತ್ಮಪ್ರತ್ಯಯ ಮೂಲವಾದ ಪ್ರತಿಭಟನೆಯ ಕೆಚ್ಚನ್ನೂ ತಂದು ಕೊಟ್ಟಿದ್ದು ಶರಣ ಚಳುವಳಿ. ಈ ಚಳುವಳಿಯಿಂದ ನಿಷ್ಪನ್ನವಾದ ಶರಣ ಧರ್ಮ ಮೊದಲು ಮಾಡಿದ ಕೆಲಸವೆಂದರೆ, ಈ ಸಮುದಾಯದವರ ಜಾತಿ ಜನ್ಮಸಂಬಂಧಿಯಾದ ಕೀಳರಿಮೆಗಳನ್ನು ಕಳೆಯುವಂತಹ ಸಮಾನತಾ ನೆಲೆಯೊಂದನ್ನು ಕಲ್ಪಿಸಿದ್ದು, ಈ ನೆಲೆಯಲ್ಲಿ ಎಲ್ಲರೂ ಸಮಾನರು : **'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವ ಭಕ್ತರೆಲ್ಲರೂ'** ಒಂದೇ ಸಮಾನತೆಯ ನೆಲೆಗೆ ಸೇರಿದವರು. ಈ ಒಂದು ಭಾವನೆಯನ್ನು ಗಟ್ಟಿಗೊಳಿಸುವಲ್ಲಿ ವರ್ಣಾಶ್ರಮ ಪ್ರತಿಪಾದನೆಯ ಮೂಲಕ, ತರತಮಗಳನ್ನು ಉಳಿಸಿಕೊಂಡು ಬಂದ ವೇದ-ಶಾಸ್ತ್ರ ಪುರಾಣ ಆಗಮಗಳನ್ನು ನಿರಾಕರಿಸಿದ್ದು ಒಂದು ಹೆಜ್ಜೆಯಾದರೆ, ವೃತ್ತಿಗಳ ಆಧಾರದ ಮೇಲೆ ವ್ಯಕ್ತಿಯ ಜಾತಿಯನ್ನು ಸ್ಥಾನಮಾನಗಳನ್ನು ನಿರ್ಣಯಿಸುವ ಕ್ರಮವನ್ನು ವಿರೋಧಿಸಿ ಪ್ರತಿಯೊಂದು ವೃತ್ತಿಯನ್ನು ಕಾಯಕವೆಂದು ಕರೆದು,ಈ ಶರಣ ಧರ್ಮದಲ್ಲಿ ಕಾಯಕವೆಲ್ಲವೂ ಪೂಜ್ಯವೆಂದೂ ಮತ್ತು ಸಮಾಜದ ಸಾಮೂಹಿಕ ಉತ್ಪಾದನೆಗೆ ಹಾಗೂ ಅದರ ಸಮಾನವಾದ ವಿತರಣೆಗೆ ಪ್ರತಿಯೊಬ್ಬರೂ ನಿರ್ವಹಿಸಬೇಕಾದ ಕರ್ತವ್ಯ ಎಂದು ಎಣಿಸಿದ್ದು ಮತ್ತೊಂದು ಮಹತ್ವದ ಹೆಜ್ಜೆಯಾಗಿದೆ. ಹೀಗಾಗಿ ಶರಣ ಚಳುವಳಿಯಲ್ಲಿ ತೊಡಗಿಕೊಂಡ ಈ ಶ್ರೀಸಾಮಾನ್ಯರು, ಮನುಷ್ಯ ಮನುಷ್ಯರ ನಡುವಣ ತರತಮಗಳನ್ನು ವೈಚಾರಿಕವಾಗಿ ಚಿಕಿತ್ಸೆಗೆ ಒಳಗು ಪಡಿಸಿದ್ದು ಗಮನಿಸಬೇಕಾದ ಸಂಗತಿಯಾಗಿದೆ. ಅಮುಗೆ ರಾಯಮ್ಮ ಎಂಬ ವಚನಕಾರ್ತಿ --

*'ವೇದ ಶಾಸ್ತ್ರ ಆಗಮ ಪುರಾಣಗಳಲ್ಲಿ*
*ಶ್ರುತಿ ಸ್ಮೃತಿಗಳಲ್ಲಿ ನುಡಿವುದು ಪುಸಿ'*

ಎಂದು ದಿಟ್ಟತನದಿಂದ ಘೋಷಿಸುತ್ತಾಳೆ. ವೇದಶಾಸ್ತ್ರಾಗಮ ಗಳಲ್ಲಿ ಹೇಳಿರುವುದೆಲ್ಲ 'ಸುಳ್ಳು' ಎಂದು ಯಾಕೆ ಹೇಳುತ್ತಾಳೆಂದರೆ, ಎಲ್ಲರೂ ಮೂಲತಃ ಸಮಾನರು ಎಂಬ ಸತ್ಯವನ್ನು ಅವುಗಳು ಮರೆ ಮಾಡುವುದರಿಂದ. ನಿಜವಾಗಿ ನೋಡಿದರೆ -

*'ಬ್ರಾಹ್ಮಣ ಮೊದಲು ಶ್ವಪಚ ಕಡೆಯಾಗಿ*
*ಎಲ್ಲರಿಗೂ ಜನನವೊಂದೇ,*
*ಆಹಾರ ನಿದ್ರೆ ಭಯ ಮೈಥುನ ಒಂದೇ*





*ಪುಣ್ಯ ಪಾಪ ಒಂದೇ ಸ್ವರ್ಗ ನರಕ ಒಂದೇ,*
*ಬೇರೆಂಬ ಭಂಗಿತರು ನೀವು ಕೇಳಿರೋ*
*ಅರಿವೇ ಸತ್ಕುಲ, ಮರೆವೇ ದುಷ್ಕುಲ'*

ಎಂದು ಹಾವಿನಹಾಳ ಕಲ್ಲಯ್ಯ ಹೇಳುತ್ತಾನೆ. ಮಾದಾರ ಚನ್ನಯ್ಯನೆಂಬ ಮತ್ತೊಬ್ಬ ಶರಣ :

*'ವೇದ ಶಾಸ್ತ್ರಕ್ಕೆ ಹಾರುವನಾಗಿ*
*ವೀರವಿತರಣಕ್ಕೆ ಕ್ಷತ್ರಿಯನಾಗಿ*
*ಸರ್ವವನಾರೈದು ವ್ಯಾಪಾರದೊಳಗಾಗಿ ವೈಶ್ಯನಾಗಿ*
*ಕೃಷಿಯ ಮಾಡುವಲ್ಲಿ ಶೂದ್ರನಾಗಿ*
*ಇಂತೀ ಜಾತಿ ಗೋತ್ರದೊಳಗಾಗಿ ನೀಚ ಶ್ರೇಷ್ಠ*
*ಎಂಬ ಎರಡು ಕುಲವಲ್ಲದೆ*
*ಹೊಲೆ ಹದಿನೆಂಟು ಜಾತಿ ಎಂಬ ಕುಲವಿಲ್ಲ'*

ಎಂದು ಹೇಳುತ್ತಾನೆ.

ಈ ಕೆಲವು ಉಕ್ತಿಗಳನ್ನು ನೋಡಿದರೆ ದಲಿತ ವಚನಕಾರರು ಎಷ್ಟು ಧೈರ್ಯದಿಂದ, ಹಿಂದೂಧರ್ಮದ ವರ್ಣಾಶ್ರಮ ವ್ಯವಸ್ಥೆಯನ್ನು ನಿರಾಕರಿಸುತ್ತ, ಕುಲ ಹಾಗೂ ಜಾತಿಗಳ ಬಗ್ಗೆ ತಮ್ಮ ಕಾಲಕ್ಕೆ ಅಗತ್ಯವಾದ ಹಾಗೂ ನಿಜವಾದ ವ್ಯಾಖ್ಯಾನ ಮಾಡಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಶರಣ ಧರ್ಮದ ಸಂದರ್ಭದಲ್ಲಿ ದಲಿತರಿಗೆ ಉಂಟಾದ ಹೊಸ ಪ್ರಜ್ಞೆಯ ಸ್ವರೂಪವನ್ನು, ಅವರ ಈ ವೈಚಾರಿಕ ನಿಲುವುಗಳು ಸ್ಪಷ್ಟಪಡಿಸುತ್ತವೆ.

**ಶರಣ ಧರ್ಮ**

ಶರಣ ಧರ್ಮದ ಮುಖ್ಯ ಸಾಧನೆ ವರ್ಣಮೂಲವಾದ ತರತಮಗಳನ್ನು ಹೋಗಲಾಡಿಸುವುದು. ವೀರಶೈವನಾಗುವುದೆಂದರೆ ಜಾತಿಯ ಗಡಿಗಳನ್ನು ಮೀರಿ ಸಮಾನತೆಯ ನೆಲೆಯಲ್ಲಿ ನಿಲ್ಲುವುದು ಎಂದು ಅರ್ಥ. **"ಚತುರ್ವರ್ಣಾತೀತನೆ ವೀರಶೈವ ನೋಡಾ"** ಎಂದು ಸಿದ್ಧರಾಮನು ಹೇಳುವ ಮಾತು ಇದನ್ನು ದೃಢಪಡಿಸುತ್ತದೆ. **'ಚತುರ್ವರ್ಣಾತೀತ'**ವಾಗುವುದು ಎಂದರೆ, ಪರಂಪರಾಗತವಾದ ನಾಲ್ಕು ವರ್ಣಗಳನ್ನು ಮೀರುವುದು ಎಂದು ಮಾತ್ರವಲ್ಲ, ಈ ನಾಲ್ಕು ವರ್ಣಗಳನ್ನು ಒಡೆದು, ಅವೆಲ್ಲವನ್ನೂ ಬೇರೊಂದು ರೀತಿಯಲ್ಲಿ ಕೂಡಿಸುವುದು; ಒಂದು ವರ್ಣ ಮತ್ತೊಂದು ವರ್ಣದ ಜತೆ ಬೆರೆತು, ಅವರೆಲ್ಲರೂ ತಮ್ಮ ಮುನ್ನಿನ ಕುಲದ ಕುರುಹುಗಳನ್ನು ಕಳೆದುಕೊಳ್ಳುವುದು ಎಂದು ಅರ್ಥ. ಬಸವಣ್ಣನವರು ತಮ್ಮ ಒಂದೆರಡು ವಚನಗಳಲ್ಲಿ -

*'ಕುಲವನರಸುವರೆ ಶರಣರಲ್ಲಿ*
*ವರ್ಣ ಸಂಕರವಾದ ಬಳಿಕ?'*

..........................................

*'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ*
*ಕೂಡಲ ಸಂಗನ ಶರಣರೇ ಕುಲಜರು'*

ಎಂದು ಹೇಳಿದ್ದಾರೆ. ಈ ಎರಡು ಉಕ್ತಿಗಳೂ ತುಂಬ ಮಹತ್ವದವುಗಳಾಗಿವೆ. ವೈದಿಕ ಧರ್ಮ ಒಂದು ಜಾತಿ ಮತ್ತೊಂದು ಜಾತಿಯೊಂದಿಗೆ ಬೆರೆಯುವುದನ್ನು **'ವರ್ಣ ಸಂಕರ'** ಎನ್ನುತ್ತದೆ. **'ವರ್ಣಸಂಕರ'** ಎನ್ನುವುದು ಹಿಂದೂಧರ್ಮದ ಪ್ರಕಾರ ಒಂದು ಪಾಪ; ದೊಡ್ಡ ಅನಾಹುತ : ಅದರಿಂದ ಧರ್ಮನಾಶ ಎಂದು ತಿಳಿಯಲಾಗಿದೆ. ಪ್ರತಿಯೊಂದು ವರ್ಣವೂ, ಚಾತುರ್ವರ್ಣದ ಚೌಕಟ್ಟಿನಲ್ಲಿ ಸುಭದ್ರವಾಗಿರುವುದೇ ಧಾರ್ಮಿಕ ಕ್ಷೇಮಕ್ಕೆ ಅತ್ಯಗತ್ಯ; ಅದರ ಬದಲು ಒಂದು ವರ್ಣ ಮತ್ತೊಂದರ ಜತೆ ಬೆರೆಯುವುದು ಅಥವಾ ವರ್ಣಸಂಕರವಾಗುವುದು ಹಾನಿಕರ; ಧರ್ಮಗ್ಲಾನಿಯ ಲಕ್ಷಣ - ಇದು 'ವರ್ಣ ಸಂಕರ'ವನ್ನು ಕುರಿತ ವೈದಿಕ ಧರ್ಮದ ನಿಲುವು. ವೈದಿಕ ಧರ್ಮವನ್ನು ಪ್ರಶ್ನೆ ಮಾಡಿದ, ಪ್ರತಿಭಟಿಸಿದ ಬಸವಣ್ಣನವರ ಪ್ರಕಾರ 'ವರ್ಣಸಂಕರ' ಅತ್ಯಂತ ಅಗತ್ಯವಾದ್ದು, ಜಾತಿ ಜಾತಿಗಳ ನಡುವಣ ತರತಮಗಳ ನಿರ್ಮೂಲನಕ್ಕೆ, ಅದರಿಂದ 'ವರ್ಣ ಸಂಕರ'ವಾಗುವುದು ಅಥವಾ 'ಚಾತುರ್ವರ್ಣಾತೀತ'ವಾಗುವುದು ಒಂದು ಹೊಸ ಸಾಮಾಜಿಕ-ಧಾರ್ಮಿಕ ಪರಿವರ್ತನೆಯ ಲಕ್ಷಣವಾಗಿರುವಾಗ, ಹೀಗೆ 'ವರ್ಣ ಸಂಕರ'ವಾದ ಬಳಿಕ. ಮತ್ತು ಆ ಮೂಲಕ ಶರಣರಾದ ಬಳಿಕ ಅದರಲ್ಲಿ ಅವರ ಹುಟ್ಟಿನಿಂದ ಬಂದಂಥ 'ಜಾತಿ'ಗಳನ್ನು ಹುಡುಕಬಾರದೆಂಬುದು ಬಸವಣ್ಣನವರ ನಿಲುವಾಗಿದೆ. ಹಾಗೆಯೇ ವ್ಯಕ್ತಿ ವ್ಯಕ್ತಿಗಳ ನಡುವೆ ತರತಮಗಳನ್ನು ಹುಡುಕದೆ 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ' ಕೂಡಲ ಸಂಗನ ಶರಣರಾಗುವುದಕ್ಕಿಂತ ಬೇರೆಯ ಶ್ರೇಷ್ಠವಾದ ಕುಲಯಾವುದೂ ಇಲ್ಲ. ಈ ದೃಷ್ಟಿಯಿಂದ ಹೇಳುವುದಾದರೆ, ಇರುವುದು ಎರಡೇ ವರ್ಗ : 'ಸತ್ಕುಲ', 'ದುಷ್ಕುಲ', 'ನೀಚ', 'ಶ್ರೇಷ್ಠ', 'ಶಿವಭಕ್ತ', (ಅದಕ್ಕೆ ಹೊರತಾದ) 'ಭವಿ'.

**ಕಾಯಕ ಜೀವಿ**

ಶರಣ ಚಳುವಳಿಯ ಈ ಹೊಸ ಧಾರ್ಮಿಕ ನಿಲುವುಗಳಲ್ಲಿ ಅಂದಿನ ಬಹುಸಂಖ್ಯಾತ ದಲಿತರು ತಮ್ಮ ಹೊಸ ಹುಟ್ಟುಗಳನ್ನು ಪಡೆದುಕೊಂಡರು. ತುಂಬ ಧೈರ್ಯದಿಂದ ಸಾಂಪ್ರದಾಯಿಕವಾದ ನಂಬಿಕೆಗಳನ್ನು ಆಚಾರ ವಿಚಾರಗಳನ್ನು ಪ್ರಶ್ನೆ ಮಾಡಿದರು. ತಮ್ಮ ತಮ್ಮ ವೃತ್ತಿಗಳ ಮೂಲಕ ಬಂದ ಕೀಳರಿಮೆಗಳನ್ನು ಕಳೆದುಕೊಂಡು 'ಕಾಯಕ ಜೀವಿ'ಗಳಾದರು. ಮತ್ತು ತಮ್ಮ ತಮ್ಮ ಅಂತರಂಗದ ಅನುಭವಗಳನ್ನು ತಮ್ಮ ಕಾಯಕದ ಪ್ರತೀಕಗಳ ಮೂಲಕ ಅಭಿವ್ಯಕ್ತಿಸುವ ಸಾಮರ್ಥ್ಯವನ್ನು ಗಳಿಸಿಕೊಂಡರು. **"ತಡಿನೆಲೆಯಿಲ್ಲದ ಮಹಾನದಿಯಲ್ಲಿ ಒಡಲಿಲ್ಲದಂಬಿಗ ಬಂದಿದ್ದೇನೆ. ಹಿಡಿವ ಬಿಡುವ ಮನವ ಬೆಲೆಗೊಟ್ಟೊಡೆ ಕಡೆ ಹಾಯಿಸುವೆ ಈ ಮಹಾ ಹೊಳೆಯ"** ಎಂದು ಅಂಬಿಗರ ಚೌಡಯ್ಯನೂ, **'ಅಂಗದ ಬೊಕ್ಕಸಕ್ಕೆ ಚಿದ್‌ಘನ ಲಿಂಗವೆಂದೆಂಬ ಬೀಗ. ಎಸಳ ತೆಗೆವುದಕ್ಕೆ ಕೈಯ್ಯ ಕಾಣೆ'** ಎಂದು ಬೊಕ್ಕಸದ ಚಿಕ್ಕಣ್ಣನೂ - ಎಂದು ಹೇಳಿಕೊಳ್ಳುವುದಕ್ಕೆ ಸಾಧ್ಯವಾದದ್ದು, ಈ ಚಳುವಳಿಯ ಸಾಧನೆಯಾಗಿದೆ.

ಈ ಅನುಭಾವಿಕ ಎಚ್ಚರದೊಂದಿಗೆ, ಈ ದಲಿತ ಶರಣರು, ತಮ್ಮ ಸುತ್ತಣ ಸಮಾಜವನ್ನೂ, ಅದರ ಅವ್ಯವಸ್ಥೆಗಳನ್ನೂ ಕುರಿತು ನಿರ್ಭೀತಿಯಿಂದ ವಿಮರ್ಶೆ ಮಾಡುವ ಕೆಚ್ಚನ್ನೂ ಪಡೆದುಕೊಂಡರೆಂಬುದು ವಿಶೇಷ ಸಂಗತಿಯಾಗಿದೆ. ಯಾವ ಜನ ಶತಮಾನಗಳ ಕಾಲ ಮೂಕವಾಗಿ, ದೀನವಾಗಿ, ಸದ್ದಿಲ್ಲದೆ, ತಮ್ಮ ವೇದನೆಗಳನ್ನು ಸಿಟ್ಟುಗಳನ್ನು ಹೇಳಿಕೊಳ್ಳಲು ಅವಕಾಶವಿಲ್ಲದಂತಹ ಶೋಷಣೆಗೆ ಒಳಗಾಗಿದ್ದರೋ, ಅದೇ ಜನ ವೈದಿಕ ಧರ್ಮದ ಪುರೋಹಿತಷಾಹೀ ಕುತಂತ್ರಗಳನ್ನೂ, ಜಾತಿ ವ್ಯವಸ್ಥೆಗಳನ್ನೂ ಧೈರ್ಯದಿಂದ

ವಿಮರ್ಶಿಸಿದ ಹಾಗೆ, ತಾವು ಪ್ರವೇಶಿಸಿದ ಹೊಸ ಧರ್ಮದ 'ಪುರೋಹಿತಶಾಹಿ'ಯನ್ನೂ ಸಾಮಾಜಿಕ ಅಸಾಂಗತ್ಯಗಳನ್ನೂ ವಿಮರ್ಶೆಗೆ ಗುರಿಪಡಿಸಿದರೆಂಬುದು, ಗಮನಿಸಬೇಕಾದ ಸಂಗತಿಯಾಗಿದೆ. ಅಕ್ಕಮ್ಮ ಎಂಬ ಮಹಿಳೆ **'ಗುರುವಾದರೂ ಆಚಾರಭ್ರಷ್ಟನಾದಡೆ, ಅನುಸರಿಸಲಾಗದು'** ಎನ್ನುತ್ತಾಳೆ. **'ವೇಷವ ತೊಟ್ಟು ಗ್ರಾಸಕ್ಕೆ ತಿರುಗುವ ವೇಷಧಾರಿಗಳ ಕಂಡಡೆ ನಾಚಿತ್ತೆನ್ನ ಮನವು'** ಎನ್ನುತ್ತಾಳೆ ಅಮುಗೆ ರಾಯಮ್ಮ. **''ಕುಲಹೀನ ಶಿಷ್ಯಂಗೆ ಅನುಗ್ರಹವಮಾಡಿ ಅವನ ಮನೆಯಲ್ಲಿ ಉಣಬಾರದೆಂದು ಅಕ್ಕಿಯ ಕಣಕವ ತಕ್ಕೊಂಡು ಹೋಗುವ ಗುರುವನು ಕಂಡರೆ ಕೆಡವಿ ಹಾಕಿ, ಮೂಗು ಕೊಯ್ದು ಇಟ್ಟಿಗೆಯಲ್ಲಿ ಒರಸಿ, ನಿಂಬೆಹುಳಿ ಹಿಂಡಿ ಪಡುವಲ ಗಾಳಿಗೆ ಹಿಡಿ''** ಎನ್ನುತ್ತಾನೆ ಅಂಬಿಗರ ಚೌಡಯ್ಯ.

ಈ ಬಗೆಯ ಧೈರ್ಯ ಮತ್ತು ಆತ್ಮಪ್ರತ್ಯಯ ಅಂದಿನ ಶೂದ್ರರಿಗೆ ದಲಿತರಿಗೆ ಬಂದದ್ದು ಸಾಮಾನ್ಯವಾದ ಸಂಗತಿಯಲ್ಲ. ಆದರೆ ಈ ಜನ ಈ ಧಾರ್ಮಿಕ ಸಾಮಾಜಿಕ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಲು ಮತ್ತು ತಮ್ಮ ಅಭಿವ್ಯಕ್ತಿಯನ್ನು ಕಂಡುಕೊಳ್ಳಲು ಸಾಧ್ಯವಾದ್ದು, ಈ ಶರಣ ಧರ್ಮ ಜನಸಾಮಾನ್ಯರ ಭಾಷೆಯಾದ ಕನ್ನಡವನ್ನು ತನ್ನ ವಿಚಾರದ ಭಾಷೆಯನ್ನಾಗಿ ಆಳವಡಿಸಿಕೊಂಡಿದ್ದರಿಂದ ಎಂಬುದನ್ನು ಮರೆಯಬಾರದು.

ಅಷ್ಟೇ ಅಲ್ಲ. ಈ ಚಳುವಳಿಯ ಕೇಂದ್ರವ್ಯಕ್ತಿಗಳಾದ ಬಸವಣ್ಣ ಮತ್ತಿತರರು, ತಮ್ಮ ಮುಚ್ಚುಮರೆಯಿಲ್ಲದ ನಡವಳಿಕೆಯ ಮೂಲಕ, ಅದಮ್ಯವಾದ ಜೀವನಪ್ರೀತಿಯ ಮೂಲಕ, **'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೂ ಒದೇ ಎಂಬೆ'** ಎಂಬ ನಿಲುವಿನ ಮೂಲಕ ಅಂದಿನ ಬಹುಸಂಖ್ಯಾತ ಜನ ಸಾಮಾನ್ಯರಿಂದ **'ಇವ ನಮ್ಮವ ಇವ ನಮ್ಮವ'** ಎಂದು ಅಂಗೀಕೃತರಾದ ಕಾರಣ, ಅಂದು ಒಂದು ಹೊಸ ಸಾಮಾಜಿಕ-ಧಾರ್ಮಿಕ ಚಳುವಳಿ ರೂಪುಗೊಳ್ಳಲು ಸಾಧ್ಯವಾಯಿತು. ಆದರೆ ಈ ಚಳುವಳಿಯ **'ದಲಿತ ಪ್ರಜ್ಞೆ'**, ಇವತ್ತಿನ 'ದಲಿತ ಪ್ರಜ್ಞೆ'ಗೆ ಹೋಲಿಸಿದರೆ, ಅನ್ಯಾಯಗಳ ಹಾಗೂ ಶೋಷಣೆಗಳ ವಿರುದ್ಧ ಹೋರಾಡುವ ಆರ್ಥಿಕ-ರಾಜಕೀಯ ಸ್ವರೂಪದ್ದಾಗಿರದೆ, ಬಹು ಮಟ್ಟಿಗೆ ಧಾರ್ಮಿಕ-ಆಧ್ಯಾತ್ಮಿಕ ಸ್ವರೂಪದ್ದಾಗಿದೆ - ಎಂಬುದು ನಿಜ. ಆದರೆ ಶರಣಧರ್ಮ ಹನ್ನೆರಡನೆಯ ಶತಮಾನದಷ್ಟು ಹಿಂದೆ, ಸಹಸ್ರಾರು ವರ್ಷಗಳಿಂದ, ಹಿಂದೂಧರ್ಮದ ವರ್ಣವ್ಯವಸ್ಥೆಯ ಯಮಭಾರದ ಕೆಳಗೆ ಬಿಡಿಸಿಕೊಳ್ಳಲು ಬಾರದಂತೆ, ಶೋಷಣೆಗೆ ನಿರ್ಲಕ್ಷ್ಯಕ್ಕೆ ಒಳಗಾದ ಈ ದೇಶದ ಕೆಳಗಿನ ಸ್ತರದ ಬದುಕಿಗೆ, ಹೊಸ ಎಚ್ಚರವನ್ನೂ, ಆತ್ಮ ಪ್ರತ್ಯಯವನ್ನೂ ಪ್ರತಿಭಟನೆಯ ದನಿಗಳನ್ನೂ ಮೊಟ್ಟ ಮೊದಲಿಗೆ ತಂದುಕೊಟ್ಟಿತೆಂಬುದು ಸಾಮಾನ್ಯವಾದ ವಿಚಾರವಲ್ಲ.

(ಕೃಪೆ : ಉಪನ್ಯಾಸ ಸಂಚಯ)

**ಸಸ್ಯ ಸಂಪತ್ತು**

## ತುಂಬೆ ಗಿಡ

ಒಂದೂವರೆ ಅಡಿಯಷ್ಟು ಎತ್ತರಕ್ಕೆ ಸಾಮಾನ್ಯವಾಗಿ ಎಲ್ಲ ಕಡೆಗಳಲ್ಲಿ; ತೇವಾಂಶದಿಂದ ಕೂಡಿದ ಮರಳು ಮಿಶ್ರಿತ ಮಣ್ಣಿನಲ್ಲಿ ತುಂಬೆಯ ಗಿಡ ಬೆಳೆದಿರುತ್ತದೆ. ದ್ರೋಣ, ದ್ರೋಣಪುಷ್ಪ, ಕುಂಭಯೋನಿ ಮುಂತಾದ ಹೆಸರುಗಳುಳ್ಳ ತುಂಬೆಯನ್ನು ಬೀಜ ನೆಟ್ಟು ಬೆಳೆಸಿ ಮೂರು ತಿಂಗಳ ನಂತರ ಬಳಸಬಹುದು.

- ತುಂಬೆಯ ಗಿಡದ ಎಲೆ, ಕಾಂಡ ಮತ್ತು ಹೂಗಳನ್ನು ಜ್ವರ, ಚರ್ಮರೋಗ, ನೋವಿನಿಂದ ಕೂಡಿದ ಊತ, ಶೀತ, ನೆಗಡಿ, ಕಣ್ಣಿನ ಸೋಂಕು, ಕಾಮಾಲೆ ಕಾಯಿಲೆಗಳಿಗೆ ಬಳಸಬಹುದು.
- ತುಂಬೆಯ ಗಿಡದ ಎಲೆ, ಹೂ ಮತ್ತು ಕಾಂಡವನ್ನು ಸ್ವಚ್ಛವಾಗಿಸಿ, ಒಣಗಿಸಿ, ಜಜ್ಜಿ ಪುಡಿ ಮಾಡಬೇಕು. ಎರಡು ಚಮಚ ಪುಡಿಗೆ ಎರಡು ಲೋಟ ನೀರು ಸೇರಿಸಿ ಕುದಿಸಿ ಅರ್ಧಲೋಟಕ್ಕೆ ಇಂಗಿಸಬೇಕು. ನಂತರ ಶೋಧಿಸಬೇಕು. ಒಂದು ಬಾರಿ ಕಾಲು ಲೋಟದಂತೆ ಎರಡು ಮೂರು ಬಾರಿ ಕೊಡುವುದರಿಂದ ಜ್ವರ ಕಡಿಮೆಯಾಗುತ್ತದೆ.
- ತುಂಬೆ ಎಲೆಯ ರಸವನ್ನು ಬಹಳ ಹಳೆಯದಾದ ಚರ್ಮ ರೋಗಗಳು ಮತ್ತು ನೋವಿನಿಂದ ಕೂಡಿದ ಊತಗಳಿಗೆ ಲೇಪಿಸುವುದರಿಂದ ಆ ತೊಂದರೆಗಳು ಪರಿಹಾರವಾಗುತ್ತವೆ.
- ಒಂದು ಭಾಗ ತುಂಬೆಯ ಎಲೆಗೆ ಕಾಲು ಭಾಗ ಬೆಲ್ಲ ಸೇರಿಸಿ ಚೆನ್ನಾಗಿ ಅರೆದು ಗೌತಲಮ್ಮ ಅಥವಾ ಮಂಗನಬಾವು ಇರುವ ಭಾಗಕ್ಕೆ ಹಚ್ಚುವುದರಿಂದ ನೋವು ಮತ್ತು ಊತ ಕಡಿಮೆಯಾಗುತ್ತದೆ.
- ಹತ್ತರಿಂದ ಹದಿನೈದು ಹನಿ ತುಂಬೆಯ ಹೂವಿನ ರಸಕ್ಕೆ ಮೂವತ್ತು ಹನಿ ಜೇನು ತುಪ್ಪ, ಅರ್ಧ ಚಿಟಿಕೆ ಬಿಳಿಗಾರದ ಪುಡಿ ಸೇರಿಸಿ ದಿನದಲ್ಲಿ ಮೂರು ನಾಲ್ಕು ಬಾರಿ ಆಹಾರಕ್ಕೆ ಮುಂಚೆ ಸೇವಿಸುವುದರಿಂದ ಶೀತ, ನೆಗಡಿ ಕಡಿಮೆಯಾಗುತ್ತದೆ.
- ಚೆನ್ನಾಗಿ ತೊಳೆದ ತುಂಬೆಯ ಹೂಗಳನ್ನು ಹಾಲಿನಲ್ಲಿ ಅರೆದು ರಸ ತೆಗೆಯಬೇಕು. ಎರಡು ಮೂರು ತೊಟ್ಟು ರಸವನ್ನು ದಿನಕ್ಕೆ ಎರಡು ಬಾರಿ ಕಣ್ಣಿಗೆ ಹಾಕುವುದರಿಂದ ಕಣ್ಣಿನಲ್ಲಿ ನವೆ, ಉರಿ ಮುಂತಾದ ಸೋಂಕು ಬೇಗ ಕಡಿಮೆಯಾಗುತ್ತದೆ.





# ಜನಪದ ಸಾಹಿತ್ಯದಲ್ಲಿ ಜೀವನ ಸಂಸ್ಕೃತಿ

– ಗೊ. ರು. ಚನ್ನಬಸಪ್ಪ
ಜಾನಪದ ವಿದ್ವಾಂಸರು ಹಾಗೂ ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು

**ಸಂಸ್ಕೃತಿ ಎನ್ನುವುದು ಯಾರೋ ಬರೆದಿಟ್ಟ ಸೂತ್ರ, ಸಂಹಿತೆಯಲ್ಲ. ಅದು ಮಾನವನೊಂದಿಗೇ ಅವನ ಅಭ್ಯಾಸ ಮತ್ತು ಅನುಭವಗಳ ಮೇಲೆ ರೂಪುಗೊಳ್ಳುತ್ತ ಬಂದದ್ದು. ಅದೊಂದು ಜೀವನ ವಿಧಾನ. ಸಂಸ್ಕೃತಿ ಸ್ವಭಾವ ಸಿದ್ಧವಾದರೆ, ನಾಗರಿಕತೆ ಪ್ರಭಾವ ಸಿದ್ಧವಾದುದು. ಸಂಸ್ಕೃತಿ ಮಾಗಿದ ಹಣ್ಣಾದರೆ, ನಾಗರಿಕತೆ ಬಣ್ಣ ಕೊಟ್ಟ ಹಣ್ಣು. ಸಂಸ್ಕೃತಿಯಲ್ಲಿ ಪ್ರಕೃತಿಯ ಅಪೇಕ್ಷೆಯನ್ನು ಕಂಡರೆ, ನಾಗರಿಕತೆಯಲ್ಲಿ ಪ್ರಕೃತಿಯ ಉಪೇಕ್ಷೆಯನ್ನು ಕಾಣುತ್ತೇವೆ.**

**ನಾನು ನನ್ನ ಗೆಳತಿ ಕೂಡ ನೀರಿಗೆ ಹೋಗಿ
ಕುಲವ ಕೇಳ್ಯಾರ ಬಹುಮಂದಿ - ಕೇಳಿದರ
ಕುಲವೆರಡು ನಮ್ಮ ಮನವೊಂದು!**

ಜನಪದ ಜೀವನ ಸಂಗೀತ ಈ ಸೊಲ್ಲು 'ಸಂಸ್ಕೃತಿ' ಎನ್ನುವ ಪದಕ್ಕೆ ಸೊಗಸಾದ ಅರ್ಥ ಹೇಳುತ್ತದೆ. 'ಕುಲವೆರಡಾದರೂ ಮನವೊಂದು' ಎಂಬ ಮಾತು ತುಂಬ ಹೃದಯಸ್ಪರ್ಶಿ. ಈ ತ್ರಿಪದಿ ಮೌಲ್ಯ, ಧರ್ಮ ಎಂಬ ಪದಗಳಿಗೂ ಅರ್ಥವಾಗುತ್ತದೆ.

'ಸಂಸ್ಕೃತಿ', ಎನ್ನುವುದು ಯಾರೋ ಬರೆದಿಟ್ಟ ಸೂತ್ರ ಸಂಹಿತೆಯಲ್ಲ. ಅದು ಮಾನವನೊಂದಿಗೇ ಅವನ ಅಭ್ಯಾಸ ಮತ್ತು ಅನುಭವಗಳ ಮೇಲೆ ರೂಪುಗೊಳ್ಳುತ್ತ ಬಂದದ್ದು. ಅದೊಂದು ಜೀವನ ವಿಧಾನ. ಅನೇಕ ವೇಳೆ ಕೆಲವರು ಸಂಸ್ಕೃತಿ ಮತ್ತು ನಾಗರಿಕತೆಗಳನ್ನು ಸಮೀಕರಿಸುವುದುಂಟು. ಆದರೆ ಇವೆರಡೂ ಭಿನ್ನವಾದವು. ಸಂಸ್ಕೃತಿ ಸ್ವಭಾವ ಸಿದ್ಧವಾದರೆ, ನಾಗರಿಕತೆ ಪ್ರಭಾವ ಸಿದ್ಧವಾದುದು. ಸಂಸ್ಕೃತಿ ಮಾಗಿದ ಹಣ್ಣಾದರೆ, ನಾಗರಿಕತೆ ಬಣ್ಣ ಕೊಟ್ಟ ಹಣ್ಣು. ಸಂಸ್ಕೃತಿಯಲ್ಲಿ ಪ್ರಕೃತಿಯ ಅಪೇಕ್ಷೆಯನ್ನು ಕಂಡರೆ, ನಾಗರಿಕತೆಯಲ್ಲಿ ಪ್ರಕೃತಿಯ ಉಪೇಕ್ಷೆಯನ್ನು ಕಾಣುತ್ತೇವೆ. ಸಂಸ್ಕೃತಿ ತಾನು ಲೋಕವನ್ನು ಕಾಣಬಯಸುತ್ತದೆ; ನಾಗರಿಕತೆಯಲ್ಲಿ ಕೃತಕತೆ ಇರಲು ಸಾಧ್ಯ; ಆದರೆ ಸಂಸ್ಕೃತಿಯಲ್ಲಿ ಅವರ ಸುಳಿವೂ ಇರುವುದಿಲ್ಲ.

### ಜನಪದ ಸಂಸ್ಕೃತಿ

ನಾವಿಲ್ಲಿ ವಿಚಾರ ಮಾಡುತ್ತಿರುವುದು ಜನಪದ ಸಂಸ್ಕೃತಿಯನ್ನು ಕುರಿತು. ಜನಪದ ಸಂಸ್ಕೃತಿಯ ಜೀವಂತ ಶಕ್ತಿಗೆ ಪ್ರೇರಣೆ ಎಂದರೆ ನಮ್ಮ ಜನಪದರ ಪರಂಪರಾನುಗತ ನಂಬಿಕೆ ಮತ್ತು ಪದ್ಧತಿ, ಮೂಲಭೂತವಾದ ದೈವಭಕ್ತಿ ಮತ್ತು ಧಾರ್ಮಿಕ ಶ್ರದ್ಧೆ, ಇವೆಲ್ಲಕ್ಕಿಂತ ಮಿಗಿಲಾದುದು ನಿಸರ್ಗದೊಡನೆ ಅವರಿಗಿರುವ ಅವಿರಳ ಸಂಬಂಧ, ಅನೂನ ವಿಶ್ವಾಸ. "ಸೃಷ್ಟಿ ಒಂದು ಅದ್ಭುತ. ಈ ಅದ್ಭುತಕ್ಕೆ ಕಾರಣಕರ್ತನೊಬ್ಬನಿದ್ದಾನೆ. ನಮ್ಮ ಕಣ್ಣಿಗೆ ಗೋಚರವಾಗದೆ ನಮಗೆ ಅನ್ನ, ನೀರು, ಗಾಳಿ, ಬೆಳಕು, ಬೆಂಕಿಗಳನ್ನು ಕೊಡುತ್ತಿರುವ ಆ ಶಕ್ತಿಗೆ ನಾವು ವಿಧೇಯರಾಗಿರಬೇಕು. ಶ್ರದ್ಧಾ ಭಕ್ತಿಗಳಿಂದ ನಡೆದುಕೊಳ್ಳಬೇಕು. ಆ 'ಶಕ್ತಿ'" ಮುನಿದರೆ ನಮಗೆ ಕಷ್ಟ ಬರುತ್ತದೆ - ಇದು ನಮ್ಮ ಜನಪದರ ನಂಬಿಕೆ. ಅವರ ಸಂಸ್ಕೃತಿಗೆ ಈ ನಂಬಿಕೆಯೇ ಆಧಾರ.

'ಜನಪದ ಸಂಸ್ಕೃತಿ' ಶಬ್ದಕ್ಕೆ ಏನೆಲ್ಲಾ ವ್ಯಾಖ್ಯೆಗಳಿದ್ದರೂ, ಅದು ಅನೇಕ ಸದ್ಗುಣಗಳ ಮೊತ್ತವೆಂಬುದಂತೂ ನಿಜ. ಜನಪದ ಸಂಸ್ಕೃತಿಯ ಹೂದೋಟದಲ್ಲಿ ಪ್ರೀತಿ, ಪ್ರೇಮ,ಕರುಣೆ, ಸಹನೆ, ಸಾಹಸ, ಅಭಿಮಾನ, ಆತ್ಮೀಯತೆ, ಅನುಕಂಪ, ಔದಾರ್ಯ, ಸಭ್ಯತೆ, ಸಜ್ಜನಿಕೆ, ಸರಳತೆ, ಪ್ರಾಮಾಣಿಕತೆ, ಶ್ರದ್ಧೆ ಶ್ರಮ, ಶಿಸ್ತು, ವಿನಯ ವಿವೇಕ, ವ್ಯವಹಾರಿಕತೆ, ಸಹಬಾಳ್ವೆ ಇಂತಹ ಹತ್ತಾರು ಮಾನವೀಯ ಮೌಲ್ಯಗಳ ವರ್ಣಮಯ ಹೂಗಳನ್ನು ಕಾಣಬಹುದು. ಜನಪದ ಸಂಸ್ಕೃತಿಯ ಹೂದೋಟವೆಂದರೆ ಜನಪದ ಸಾಹಿತ್ಯ. ಅದು ಅವರ ಬದುಕಿನ ಪ್ರತಿಬಿಂಬ. ಹೆಚ್ಚೇನು ಜನಪದ ಸಾಹಿತ್ಯ ಜನಪದ ಸಂಸ್ಕೃತಿಯ ವಿಶ್ವಕೋಶ.

ಈ ಹೂದೋಟದಲ್ಲಿ ಅಡ್ಡಾಡಿ ಅಲ್ಲಿ ಕಂಗೊಳಿಸುವ ಕೆಲವು ಹೂಗಳ ಸೊಗಸನ್ನಾದರೂ ಸವಿಯೋಣ ;

**ಚಿಕ್ಕತ್ತೆ ಮಗಳೆ ಚಿನ್ನದುಂಗುರದವಳೆ
ಸುತ್ತೇಳು ಪೌಳಿಯ ಮನೆಯವಳೆ - ನನ್ನ ಚಲುವೆ
ಸುತ್ತಿ ಬರುತೀನಿ ದನಿತೋರೆ!**

ಈ ತ್ರಿಪದಿ ನೋಡಲು ಸರಳವಾಗಿ ಕಂಡರೂ ಅರ್ಥ ಜೇಂಗೊಡವನ್ನೇ ತುಂಬಿಕೊಂಡಿದೆ. ಅತ್ತೆಯ ಮಗಳೆಂಬ ಹತ್ತಿರದ ಸಂಬಂಧವಿದ್ದರೂ ಈ ಯುವಕನಿಗೆ ಸದರವಿಲ್ಲ. ಮದುವೆಗೆ ಮುನ್ನ ಹರೆಯದ ಹುಡುಗರು ಚೆಲ್ಲಾಟವಾಡುವುದು ಜನಪದ ಸಮಾಜದಲ್ಲಿ ಸಲ್ಲದು. ಅಂತೇ ಆತ ಸಂಯಮ ವಹಿಸಿದ್ದಾನೆ. ಇಲ್ಲಿನ ಏಳು ಸುತ್ತಿನ ಪೌಳಿ ಸಾಮಾಜಿಕ ಕಟ್ಟುಪಾಡುಗಳ ಸಂಕೇತವಾಗುತ್ತದೆ. 'ಆ ಕಟ್ಟುಪಾಡುಗಳನ್ನು ಅನುಸರಿಸಿ ನಿನ್ನ ಬಳಿಗೆ ಬರುತ್ತೇನೆ ಎನ್ನುವುದನ್ನು 'ಸುತ್ತಿ ಬರುತ್ತೀನಿ' ಎನ್ನುವ ಸಾಲು ಹೇಳುತ್ತದೆ. ಇಲ್ಲಿ ಯುವಕನ ಸಂಯಮವನ್ನು ಕಾಣುತ್ತೇವೆ'. ಸಂಸ್ಕೃತಿಯ ಕಣಜದಲ್ಲಿ ಸಂಯಮ ಬಹು ಬೆಲೆಬಾಳುವ ಕಾಳು.

**ಜನಪದ ಸಂಸ್ಕೃತಿ ಶಬ್ದಕ್ಕೆ ಏನೆಲ್ಲಾ ವ್ಯಾಖ್ಯೆಗಳಿದ್ದರೂ ಅದು ಅನೇಕ ಸದ್ಗುಣಗಳ ಮೊತ್ತವೆಂಬುದಂತೂ ನಿಜ. ಜನಪದ ಸಂಸ್ಕೃತಿಯ ಹೂದೋಟದಲ್ಲಿ ಪ್ರೀತಿ, ಪ್ರೇಮ, ಕರುಣೆ, ಸಹನೆ, ಸಾಹಸ, ಅಭಿಮಾನ, ಆತ್ಮೀಯತೆ, ಅನುಕಂಪ, ಔದಾರ್ಯ, ಸಭ್ಯತೆ, ಸಜ್ಜನಿಕೆ, ಪ್ರಾಮಾಣಿಕತೆ, ಶ್ರದ್ಧೆ, ಶ್ರಮ, ಶಿಸ್ತು, ವಿನಯ, ವಿವೇಕ, ಸಹಬಾಳ್ವೆ ಇಂತಹ ಹತ್ತಾರು ಮಾನವೀಯ ಮೌಲ್ಯಗಳ ವರ್ಣಮಯ ಹೂಗಳನ್ನು ಕಾಣಬಹುದು. ಜನಪದ ಸಂಸ್ಕೃತಿಯ ಹೂದೋಟವೆಂದರೆ ಜನಪದ ಸಾಹಿತ್ಯ. ಅದು ಜನಪದ ಸಂಸ್ಕೃತಿಯ ವಿಶ್ವಕೋಶ.**

ತನ್ನನ್ನು ಮೆಚ್ಚಿರುವ ಮಾವನ ಮಗನನ್ನು ಹುಡುಗಿಯೂ ಮೆಚ್ಚಿಕೊಳ್ಳುತ್ತಾಳೆ. ಅವನ ಬಗ್ಗೆ ಪ್ರೇಮಾಭಿಮಾನ ತೋರಿಸುತ್ತಾಳೆ ;

**ಕಬ್ಬಿನ ಹೊಲದವನೆ, ಗುಬ್ಬಿಯ ಛಲದವನೆ**
**ಕೊಬ್ಬುಗಾರ ಮಾವ ಹೆಬ್ಬೂರ - ಚೆಲುವಾನು**
**ಹುಬ್ಬಿನಲಿ ಹುಲಿಯ ತಿವಿದಾನೊ!**

**ಹಳ್ಳಿಕಾರರ ಹುಡುಗ। ಇರುಳೆದ್ದು ಬರುವಾಗ**
**ಬೆಳ್ಳಿಯುಂಗುರದ ಬೆಳಕೀಗೆ - ಹಾರಾಡೋ**
**ಬೆಳ್ಳಕ್ಕಿ ಹಿಂಡು ಬೆದರಾವೂ!**

ಪ್ರೇಮಗೀತೆಯೆಂದರೆ ಹೀಗಿರಬೇಕು. ಈ ಮಾತುಗಳಲ್ಲಿ ಪ್ರೇಮಿಗಳ ಹೃದಯ ಎದ್ದು ಕುಣಿಯುತ್ತದೆ. ಮನ ಮೈ ಮರೆಸುತ್ತದೆ. ಆ ಚಲುವೆಯ ಮಾವನ ಮಗ ಕಬ್ಬಿನ ಹೊಲದವ ಓಡಿಸಿದರೂ ಮತ್ತೆ ಬರುವ ಗುಬ್ಬಿಯ ಛಲದವ. ಅಷ್ಟೇ ಅಲ್ಲ, ತನ್ನ ಹುಬ್ಬಿನಲ್ಲಿ ಹುಲಿಯನ್ನು ತಿವಿಯುವ ಶೂರ! ಆತ ರಾತ್ರಿಯಲ್ಲಿ ಬರುತ್ತಿದ್ದರೆ, ಅವನ ಕೈ ಬೆರಳಿನ ಉಂಗುರ ಹೊಳೆದು ಹೊರಚೆಲ್ಲುವ ಬೆಳಕಿಗೆ ಬೆಳ್ಳಕ್ಕಿ ಹಿಂಡು ಬೆದರುತ್ತದಂತೆ!

## ದಾಂಪತ್ಯ ಜೀವನ

ದಾಂಪತ್ಯ ಜೀವನದ ಒಂದು ದೊಡ್ಡ ಅಪೇಕ್ಷೆಯೆಂದರೆ ಸಂತಾನ. ಸಂಸಾರ ಜೀವನದಲ್ಲಿ ಸಂತಾನಕ್ಕೆ ಭಾವನಾತ್ಮಕ ಸಂಬಂಧವಿದೆ. ಹೆಣ್ಣು ಹೃದಯಕ್ಕೆ 'ತಾಯಿ' ಎನಿಸಿಕೊಳ್ಳಬೇಕೆಂಬ ಸಹಜ ಬಯಕೆ. ಮಕ್ಕಳಾದರೆ ಸಾಕು; ಮತ್ತೇನನ್ನು ಆಕೆ ಬಯಸುವುದಿಲ್ಲ. ಹತ್ತು ಮಂದಿಯ ಮಧ್ಯೆ ಮುತ್ತೈದೆಯಾಗಿ ಮಕ್ಕಳ ತಾಯಿಯಾಗಿ ಬದುಕಬೇಕೆಂಬ ಹಂಬಲದಿಂದ ದೇವರಲ್ಲಿ ಹರಕೆ ಬೇಡುತ್ತಾಳೆ. ಹೀಗೆ ಬೇಡುವವರೂ ಶುದ್ಧರಾಗಿರಬೇಕೆಂದು ನಮ್ಮ ಜನಪದ ಸಾಹಿತ್ಯ ಹೇಳುತ್ತದೆ ;

**ಅತ್ತಂತ ಮಕ್ಕಳಿಗೆ ತುತ್ತು ರೊಟ್ಟಿ ಕೊಡಲಿಲ್ಲ**
**ಮಕ್ಕಳಬೇಡಿ ಪರ್ವತಕೆ - ಹೋದಾರೆ**
**ಮುಕ್ಕಣ್ಣ ಶಿವನು ನೆನೆದೇನ!**

ನಡೆಯಲ್ಲಿ ಶುದ್ಧವಾಗದೆ ಹರಕೆ ಹೊತ್ತರೆ ಮುಕ್ಕಣ ಶಿವನು ನಕ್ಕು 'ಅಣಕವಾಡುತ್ತಾನೆ'. ಅಳುವ ಮಗುವಿಗೆ ಒಂದು ರೊಟ್ಟಿಯ ತುಣುಕು ಕೊಡಲಾಗದ ಆಕೆಗೆ ಮಕ್ಕಳ ಫಲ ಬೇಡುವ ಹಕ್ಕೂ ಇರಬಾರದು. ಒಳ್ಳೆಯ ಎಳ್ಳನ್ನು ಒಳಗಿಟ್ಟು ಜೊಳ್ಳನ್ನು ದಾನ ಮಾಡಿದರೆ ಅವನಿಗೆ ದಾನದ ಫಲ ಹೇಗೆ ದೊರೆಯಲು ಸಾಧ್ಯ? ಇಂತಹ ವಿಪರ್ಯಾಸಗಳು ಜನಪದ ಸಂಸ್ಕೃತಿಗೆ ಒಪ್ಪುವುದಿಲ್ಲ.

## ವಾತ್ಸಲ್ಯ

ಜನಪದ ಬದುಕಿನಲ್ಲಿ ವಾತ್ಸಲ್ಯ ಮಳೆಗೆರೆಯುತ್ತದೆ. ಅಲ್ಲಿ ಬರುವ ನುಡಿಗಳು ತಿಳಿನೀರಿನಂತೆ ಪರಿಶುದ್ಧ. ಹೃದಯವೇ ಮಾತನಾಡುತ್ತದೆ. ಹೆತ್ತ ತಾಯಿ ತನ್ನ ಮಗುವನ್ನು ತೊಟ್ಟಿಲಲ್ಲಿಟ್ಟು ತೂಗುವಾಗ ಕೇಳಬೇಕು. ವಾತ್ಸಲ್ಯದ ಪ್ರವಾಹವೇ ಹರಿದು ಬರುತ್ತದೆ. ತೊಟ್ಟಿಲಲ್ಲಿ ಮಲಗಿದ ಕೂಸನ್ನು 'ತೊಳೆದ ಮುತ್ತು' ಎಂದು ಕರೆಯುತ್ತಾಳೆ. ಆಕೆಯ ಕಂದನ ಹುಬ್ಬು ಬೇವಿನ ಎಸಳಂತೆ! ಕಣ್ಣು ಮಾವಿನ ಹೋಳಂತೆ!

**ತೊಟ್ಟಿಲಿನೊಳಗೆ ಪುಟ್ಟಕಂದ ಮಲಗ್ಯಾವನೆ**
**ಸೃಷ್ಟಿಗೊಡೆಯನ ಮಡದಿ - ಪಾರ್ವತಿ ದೇವಿ**
**ದೃಷ್ಟಿ ತಗಲ್ಯಾವು ತೆರೆಹಾಕು!**

ವಾತ್ಸಲ್ಯದ ಶ್ರೀಶೈಲ ಈ ತ್ರಿಪದಿ. ತನ್ನ ಕಂದನನ್ನು ನೋಡಲು 'ಸೃಷ್ಟಿಗೊಡೆಯನ ಮಡದಿ ಪಾರ್ವತಿ ದೇವಿ'ಯೇ ಬರುತ್ತಾಳಂತೆ. ಆಕೆಯ ದೃಷ್ಟಿಯೂ ತಾಗಬಾರದಂತೆ. ತನ್ನ ಕರುಳ ಬಳ್ಳಿಯ ಬಗೆಗೆ ಅಷ್ಟೊಂದು ಮಮತೆ. ಈ ಮಗು ಬೆಳೆದು ತೊಟ್ಟಿಲು ಬಿಟ್ಟು ಹೊರಗೆ ಆಡಲು ಹೋಗುತ್ತದೆ. ಆಗ ಈ ತಾಯಿ ಒಂದು ಮನಮೋಹಕ ಮಾತನ್ನು ಆಡುತ್ತಾಳೆ ;

**ನನ್ನಯ್ಯನಂಥೋರು ಹನ್ನೆರಡು ಮಕ್ಕಳು**
**ಹೊನ್ನೇಯ ಮರದ ನೆರಳಾಗೆ - ಆಡುವಾಗ**
**ಸನ್ಯಾಸಿ ಜಪವ ಮರೆತಾನು!**

ಆಕೆಯ ಮಗನಷ್ಟೇ ಅಲ್ಲ, ಆತನಂತಹ ಹತ್ತಾರು ಮಕ್ಕಳು ಹೊನ್ನೆಯ ಮರದಡಿಯಲ್ಲಿ ಆಡುವಾಗ, ಆ ಸುಂದರ ದೃಶ್ಯ ನೋಡಿ ಸರ್ವಸಂಗ ಪರಿತ್ಯಾಗ ಮಾಡಿದ ಸನ್ಯಾಸಿಯೂ ತನ್ನ ಜಪವನ್ನು ಮರೆಯುತ್ತಾನಂತೆ. ಮಮಕಾರದ ಬಲೆಗೆ ಸಿಲುಕುತ್ತಾನಂತೆ! ಇಲ್ಲಿನ ವಾತ್ಸಲ್ಯದ ಬೆಳಕು ಎಲ್ಲರ ಮಕ್ಕಳ ಮೇಲೂ ಚೆಲ್ಲಿದೆ. ತಾಯಿ ಹೃದಯದ ವೈಶಾಲ್ಯತೆಯನ್ನು ತೋರಿದೆ.

**ಜನಪದದಲ್ಲಿ ಸೋಮಾರಿತನಕ್ಕೆ ಮನ್ನಣೆಯಿಲ್ಲ. ಬೆವರು ಹರಿಸಿ ದುಡಿಯುವವರಿಗೆ ಮನ್ನಣೆ. ಅವರು ನಿಜವಾದ ಅರ್ಥದಲ್ಲಿ ಕಾಯಕ ಯೋಗಿಗಳು. ಶ್ರಮದ ದುಡಿಮೆ ಅವರ ಜೀವನ ಸೂತ್ರ. ದುಡಿಯದೆ ತಿನ್ನುವುದು ಪಾಪವೆಂದು ಅವರು ಬಗೆಯುತ್ತಾರೆ. ಹಗಲೆಲ್ಲ ಮೈ ಮುರಿದು ಕೆಲಸ ಮಾಡುತ್ತಾರೆ. ರಾತ್ರಿ ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಾರೆ. ಎಲ್ಲರಿಗೂ ಹೀಗಿದ್ದರೆ ಬಡತನಕ್ಕೆ ಬೆಂಕಿ ಬೀಳುವಲ್ಲಿ ಸಂಶಯವಿಲ್ಲ. ಆದರೆ ಇಂದು ದುಡಿಯುವವರಿಗಿಂತ ದುಡಿಯದೆಯೇ ತಿನ್ನುವವರ ಸಂಖ್ಯೆ ಹೆಚ್ಚಾಗಿದೆ. ಆ ಕಾರಣದಿಂದಲೇ ಬಡತನ ನಿವಾರಣೆ ಇನ್ನೂ ಮುಟ್ಟಲಾಗದ ಗುರಿಯಾಗಿದೆ.**





**ಜನಪದ ಸಂಸ್ಕೃತಿಯಲ್ಲಿ ನಾವು ಕಾಣುವ ಮತ್ತೊಂದು ವಿಶೇಷವೆಂದರೆ ಪಡೆದ ಸಹಾಯಕ್ಕೆ ಅವರು ಸಲ್ಲಿಸುವ ಕೃತಜ್ಞತೆ. ಇದೊಂದು ದೊಡ್ಡ ಗುಣ. ಪಡೆದ ನೆರವಿನ ಪ್ರಮಾಣ ಅವರಿಗೆ ಮುಖ್ಯವಲ್ಲ; ನೆರವು ನೀಡಿದ ಔದಾರ್ಯ ಮುಖ್ಯ. ಅಂತೇ ಸೃಷ್ಟಿಸಿದ ದೇವರಿರಲಿ, ಹುಟ್ಟಿದ ಮನೆಯಿರಲಿ, ಕೊಟ್ಟ ಮನೆಯಿರಲಿ ಎಲ್ಲ ಕಡೆಯು ಋಣ ಸಲ್ಲಿಸುವ ಗುಣ ಅವರದು.**

## ತೌರಿನ ಅಭಿಮಾನ

ಹೆಣ್ಣಿಗೆ ತನ್ನ ತೌರೆಂದರೆ ಅಪಾರವಾದ ಕಕ್ಕುಲತೆ. ತೌರಿನ ಸಂಬಂಧ ಬಿಟ್ಟು ಬೇರಾಗದಂತಹುದು. 'ಕಣ್ಣ ಗುಳಿ ಬಿದ್ದು, ಕೆನ್ನೆ ಒಳಹೋಗಿ, ಬೆನ್ನು ಬಾಗಿದರೂ ಕರೆಸಿ ಕಳುಹಿಸಲಿಕ್ಕೆ ಅಣ್ಣ ತಮ್ಮರು ಬೇಕು. ಹೆಣ್ಣು ತನ್ನ ತೌರಿನ ಸಿರಿತನ ಬಡತನ ನೋಡುವುದಿಲ್ಲ. ಅವಳಿಗೆ ಅಭಿಮಾನವೊಂದೇ ಮುಖ್ಯ. ಅದು ಕರುಳಿನ ಸಂಬಂಧ. ತನ್ನ ತೌರಿನ ಬಗ್ಗೆ ಎಷ್ಟು ಹೇಳಿದರೂ ಆಕೆಗೆ ತೃಪ್ತಿಯಿಲ್ಲ.ಅವಳದು ಹೊಗಳಿಕೆಯಲ್ಲ, ನಿಜವಾದ ಅಭಿಮಾನ. ರಾಗಿಯ ಒಣರೊಟ್ಟಿ, ರಾಜಗೋಳಿ ಸೊಪ್ಪಿನ ಪಲ್ಯ', ತಿನ್ನುವ ಆಕೆಯ ತೌರಿನವರು ರಾಜ್ಯಕ್ಕೆಲ್ಲಾ ಬಡವರಾದರೂ, ನಾಲ್ಕು ದಿನ ಅಲ್ಲಿ ಇದ್ದು ಬರಬೇಕೆಂಬ ಹಂಬಲ ಆಕೆಯದು. ಆಕೆಯ ತೌರು ಮನೆಯವರು ಭೌತಿಕವಾಗಿ ಬಡವರಿರಬಹುದು. ಆದರೆ ಧಾರ್ಮಿಕವಾಗಿ ದೊಡ್ಡವರು ;

**ಬಡವಾರು ಬಗ್ಗಾರು। ಹೆಡಗಿ ಬುಟ್ಟಿಯವರು**
**ಹೋಗೀರಿ ನನ್ನ ತವರೀಗೆ - ನಮ್ಮಣ್ಣ**
**ಧರ್ಮದ ಹಗೇವ ತೆಗೆದಾನ!**

ಎಂತಹ ಭಾವ ಶ್ರೀಮಂತಿಗೆ ಅವರಣ್ಣನದು. ಕೇವಲ ಕಾಳು ಕಡಿಯ ಹಗೇವಲ್ಲ ; ಧರ್ಮದ ಹಗೇವು. ಧಾರ್ಮಿಕ ದೃಷ್ಟಿಯ ಬಡತನವಿರವಾಗೆಲ್ಲ ಅಣ್ಣನ ಹಗೇವಿನಲ್ಲಿ ಧರ್ಮದ ಕಾಳನ್ನು ಪಡೆದುಕೊಳ್ಳಬೇಕೆಂಬುದು ಆಕೆಯ ಅಪೇಕ್ಷೆ. ಅವಳ ತೌರಿನ ಬಗ್ಗೆ ಆಡುವ ಇನ್ನೊಂದು ಅಭಿಮಾನದ ನುಡಿಯನ್ನು ಕೇಳಿ ;

**ಅಣ್ಣನ ಆರೆತ್ತು, ತಮ್ಮನ ಮೂರೆತ್ತು**
**ನಮ್ಮಪ್ಪನೆತ್ತು ಹದಿನಾರು ಬರುವಾಗ**
**ನನ್ನೂರ ಭೂಮಿ ನಡುಗ್ಯಾವೋ!**

ತೌರು ಮನೆಯವರ ಎತ್ತುಗಳು ಬರುವಾಗ ಭೂಮಿಯೇ ನಡುಗಬೇಕಾದರೆ, ಆ ಎತ್ತುಗಳ ನಡಿಗೆಯ ಸಡಗರ ಹೇಗಿರಬೇಕು? ಇಂತಹ ಅಭಿಮಾನ ಮಾನವೀಯ ಸಂಬಂಧವನ್ನು ಎಷ್ಟು ಮಧುರವಾಗಿ ಉಳಿಸುತ್ತಾರೆಂಬುದನ್ನು ನಾವು ಗಮನಿಸಬೇಕು.

## ಜೀವಕಾರುಣ್ಯ

ಜನಪದ ಸಂಸ್ಕೃತಿಯಲ್ಲಿ ಅದರ ಅನುಕಂಪಗಳಿಗೆ ಕೊರತೆಯಿಲ್ಲ. ಜೀವಕಾರುಣ್ಯ ಅವರ ಕರುಳಲ್ಲಿ ಮಿಡಿಯುತ್ತದೆ. ಒಂದು ಬೇಟೆಗಾರರ ಮನೆ, ಬೇಟೆಗೆ ಹೊರಟು ನಿಂತ ಅಣ್ಣನನ್ನು ಕುರಿತು ತಂಗಿ ಒಂದು ಮಾತು ಹೇಳುತ್ತಾಳೆ ;

**ಹುಣ್ಣಿಮೆ ಮರುದಿನದ ಅಣ್ಣ ಬೇಟೆಗೆ ಹೊಂಟ**
**ಹೆಣ್ಣ ಚಿಗರಿಯ ಕೊಲಬ್ಯಾಡ - ಅಣ್ಣಯ್ಯ**
**ನನ್ನ ಸರಿ ಮಾಡಿ ಬಿಡು ಆದನ!**

ತಂಗಿಯ ಈ ಕರಳು ಕರಗಿಸುವ ಕರೆ ಅಣ್ಣನ ಬೇಟೆಯನ್ನೇ ನಿಲ್ಲಿಸಿರಬೇಕು. ಆ ಮೂಕ ಜೀವಿಯನ್ನು ತನ್ನಂತೆ ನೋಡಬೇಕೆಂದು ಅಣ್ಣನಿಗೆ ಹೇಳುತ್ತಾಳೆ! ಈ ತ್ರಿಪದಿಯಲ್ಲಿ ಇನ್ನೊಂದು ಸಂದೇಶವನ್ನೂ ಕಾಣಬಹುದು. ಅಣ್ಣ ರಸಿಕನಿರಬೇಕು. ಅನ್ಯ ಹೆಣ್ಣಿಗೆ ಕಣ್ಣು ಹಾಕಿರಬೇಕು. ಇದನ್ನು ಸೂಕ್ಷ್ಮವಾಗಿ ಗಮನಿಸಿದ ತಂಗಿ, ಆ ಹೆಣ್ಣನ್ನು ತನ್ನಂತೆ ನೋಡಬೇಕು ಎಂದಿರಬೇಕು. ಈ ಮಾತು ಎಷ್ಟು ಪರಿಣಾಮಕಾರಿಯಾಗಿದೆ ನೋಡಿ. ನೇರವಾದರೂ ಸೂಕ್ಷ್ಮವಾಗಿ ಹೇಳಿರುವ ಹಿತನುಡಿ ಇಂತಹ ಮಾತುಗಳಲ್ಲಿ ಸಂಸ್ಕೃತಿಯ ಸುಗಂಧವನ್ನೇ ಅನುಭವಿಸಬಹುದು.

## ಕಾಯಕ ಸಿದ್ಧಾಂತ

ನಮ್ಮ ಜನಪದರಲ್ಲಿ ಸೋಮಾರಿತನಕ್ಕೆ ಮನ್ನಣೆಯಿಲ್ಲ. ಬೆವರು ಹರಿಸಿ ದುಡಿಯುವವರಿಗೆ ಮನ್ನಣೆ. ಅವರು ನಿಜವಾದ ಅರ್ಥದಲ್ಲಿ ಕಾಯಕ ಯೋಗಿಗಳು. ಶ್ರಮದ ದುಡಿಮೆ ಅವರ ಜೀವನಸೂತ್ರ. ದುಡಿಯದೆ ತಿನ್ನುವುದು ಪಾಪವೆಂದು ಅವರು ಬಗೆಯುತ್ತಾರೆ. ಸದಾ ದುಡಿಮೆಯಲ್ಲಿ ತೊಡಗುತ್ತಾರೆಂದೇ ಅಲ್ಲದ ಚಟುವಟಿಕೆಗಳನ್ನು ತೊಡಗಲು ಅವರಿಗೆ ಬಿಡುವುದಿಲ್ಲ. ಹಗಲೆಲ್ಲ ಮೈಮುರಿದು ಕೆಲಸ ಮಾಡುತ್ತಾರೆ. ರಾತ್ರಿ ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಾರೆ. ಎಲ್ಲರಿಗೂ ಹೀಗಿದ್ದರೆ ಬಡತನಕ್ಕೆ ಬೆಂಕಿಬೀಳುವಲ್ಲಿ ಸಂಶಯವಿಲ್ಲ. ಆದರೆ ಇಂದು ದುಡಿಯುವವರಿಗಿಂತ ದುಡಿಯದೆಯೇ ತಿನ್ನುವವರ ಸಂಖ್ಯೆ ಹೆಚ್ಚಾಗಿದೆ. ಆ ಕಾರಣದಿಂದಲೇ ಬಡತನ ನಿವಾರಣೆ ಇನ್ನೂ ಮುಟ್ಟಲಾಗದ ಗುರಿಯಾಗಿದೆ. ಜನಪದ ಸಂಸ್ಕೃತಿ ಇಲ್ಲಿ ನಮಗೆ ಪಾಠವಾಗಬೇಕು. ಹಳ್ಳಿಯ ಹೆಣ್ಣೊಬ್ಬಳು ಶ್ರಮಜೀವಿ ತಮ್ಮನ ಬಗ್ಗೆ ಒಂದು ಮಾತು ಹೇಳುತ್ತಾಳೆ ;

**ಎತ್ತು ಕಾಯಲು ಹೋದವ, ಚಿಕ್ಕ ತಮ್ಮಯ್ಯನು**
**ಹುತ್ತಾನ ಒರಗಿ ಮಲಗ್ಯಾನ - ಹಣೆ ಮೇಲೆ**
**ಮುತ್ತು ಬಂದಾವೆ ಬೆಲೆಮಾಡೆ!**

ಕಾಯಕದ ಸಿದ್ಧಾಂತ ಸುಂದರ ಪ್ರತಿಮೆಯಾಗಿ ನಮ್ಮ ಮುಂದೆ ನಿಲ್ಲುತ್ತದೆ. ಹೊಲದಲ್ಲಿ ಬೇಸಾಯ ಮುಗಿಸಿ ಎತ್ತುಗಳನ್ನು ಮೇಯಿಸಲು ಹೋದ ತಮ್ಮ ಎತ್ತುಗಳನ್ನು ಮೇಯ ಬಿಟ್ಟು ಹುತ್ತವೊಂದನ್ನು ಒರಗಿ ಮಲಗುತ್ತಾನೆ. ಆಯಾಸದಿಂದ ಹಾಗೆಯೇ ನಿದ್ದೆ ಬರುತ್ತದೆ. ಬಿಸಿಲಿನ ಝಳಕ್ಕೆ ಹಣೆಯಲ್ಲಿ ಬೆವರಿನ ಹನಿಮೂಡಿದೆ. ಆ ಹನಿಗಳನ್ನು ನೋಡಿದ "ಅಕ್ಕ ಮುತ್ತು ಬಂದಾವೆ", ಅವದಕ್ಕೆ ಬೆಲೆ ಮಾಡು ಎಂದು ತನ್ನ ಗೆಳತಿಗೆ ಹೇಳುತ್ತಾಳೆ. ತುಂಬ ಸೊಗಸಾದ ಮಾತುಗಳು, ಶ್ರಮಜೀವಿಯ ಬೆವರಿಗೆ ಬೆಲೆ ಮಾಡುವುದು ಸಾಮಾನ್ಯವಲ್ಲ, ಹೀಗೆ ಶ್ರಮದ ದುಡಿಮೆಗೆ ಶ್ರೇಷ್ಠಸ್ಥಾನ ಕೊಡುತ್ತಾರೆ ನಮ್ಮ ಜನಪದರು.

## ಕೃತಜ್ಞತೆ

ಜನಪದ ಸಂಸ್ಕೃತಿಯಲ್ಲಿ ನಾವು ಕಾಣುವ ಮತ್ತೊಂದು ವಿಶೇಷವೆಂದರೆ ಪಡೆದ ಸಹಾಯಕ್ಕೆ ಅವರು ಸಲ್ಲಿಸುವ ಕೃತಜ್ಞತೆ. ಇದೊಂದು ದೊಡ್ಡಗುಣ. ಪಡೆದ ನೆರವಿನ ಪ್ರಮಾಣ ಅವರಿಗೆ ಮುಖ್ಯವಲ್ಲ. ನೆರವು ನೀಡಿದ ಔದಾರ್ಯ ಮುಖ್ಯ. ಅಂತೇ ಸೃಷ್ಟಿಸಿದ ದೇವರಿರಲಿ, ಹುಟ್ಟಿದ ಮನೆಯಿರಲಿ, ಕೊಟ್ಟ ಮನೆಯಿರಲಿ ಎಲ್ಲ ಕಡೆಯೂ ಋಣ ಸಲ್ಲಿಸುವ ಗುಣ ಅವರದು. ಸೃಷ್ಟಿಸಿದ ದೇವರನ್ನಂತೂ ಸಾವಿರ ಬಗೆಯಲ್ಲಿ

ನೆನೆಯುತ್ತಾರೆ. ಹರಕೆ ಸಲ್ಲಿಸುತ್ತಾರೆ. ಹೊತ್ತು ಮೆರೆಯುತ್ತಾರೆ. ಮೈ ಮರೆಯುತ್ತಾರೆ. ಆ ಮೂಲಕ ಅನಿರ್ವಚನೀಯ ಆನಂದ ಅನುಭವಿಸುತ್ತಾರೆ. ನೆಮ್ಮದಿ ಕಾಣುತ್ತಾರೆ. ಇನ್ನು ಲೌಕಿಕ ಬದುಕಿನಲ್ಲೂ ಅಷ್ಟೆ. ಒಬ್ಬಾಕೆ ತನ್ನ ನೆರೆಮನೆಯಿಂದ ಬೀಸುವ ಕಲ್ಲು ಕಡ ತಂದಿದ್ದಾಳೆ. ಆ ಕಲ್ಲಿನಲ್ಲಿ ಕಾಳು ಬೀಸುವಾಗ ಒಂದು ಸೊಲ್ಲು ಆಕೆಯಿಂದ ಮೂಡಿ ಬರುತ್ತದೆ ;

**ಕಲ್ಲು ಕೊಟ್ಟವ್ವಾಗೆ ಎಲ್ಲ ಭಾಗ್ಯವ ಬರಲಿ**
**ಪಲ್ಲಕ್ಕಿ ಇರಲಿ, ಪದವಿರಲಿ - ಅವರೀಗೆ**
**ನೆಲ್ಲ ಬಾನಿರಲಿ ಮನಿಯಿರಲಿ!**

ಹೃದಯ ತುಂಬಿದ ಹರಕೆ ಬೀಸುವ ಕಲ್ಲಿನಂಥ ಒಂದು ಸಣ್ಣ ವಸ್ತುವನ್ನು ಕೊಟ್ಟವರಿಗೆ, ಅದರಲ್ಲೂ ಎರವಲಾಗಿ ಕೊಟ್ಟವರಿಗೆ ಈ ಹೆಣ್ಣು ಹಾರೈಸುವುದು 'ಎಲ್ಲ ಭಾಗ್ಯವನ್ನು ಪಲ್ಲಕ್ಕಿ ಪದವಿಗಳನ್ನು, ನೆಲ್ಲಬಾನ ಮತ್ತು ಮನಿಮಾರನ್ನು', ಇಂತಹ ಕೃತಜ್ಞತಾ ಭಾವ ಎಲ್ಲರಲ್ಲೂ ಇರಬೇಕು. ಇದು ಸಂಸ್ಕೃತಿಯ ಲಕ್ಷಣ.

**ಸಾತ್ವಿಕ ಜೀವನ**

ಹೀಗೆ ತಾವೂ ಸ್ವತಃ ಶುದ್ಧ ನುಡಿ, ಶುದ್ಧ ನಡೆಗಳಿಂದ ಸಾತ್ವಿಕ ಜೀವನ ನಡೆಸಿ, ತಮ್ಮ ಸುತ್ತಮುತ್ತಿನವರೊನೆ ಹಾರ್ದಿಕ ಸಂಬಂಧವಿಟ್ಟುಕೊಂಡು, ಕೃತಜ್ಞತೆಗೆ ಇಂಬುಗೊಡದೆ ಸರಳ ಮಾರ್ಗದಲ್ಲಿ ನಡೆದವರು ನಮ್ಮ ಜನ. ಇದನ್ನು ಜೀವನ ಸಂಸ್ಕೃತಿ ಎನ್ನದೆ ಮತ್ತೇನೆಂದು ಕರೆಯಲು ಸಾಧ್ಯ?

ಈ ಲೇಖನದಲ್ಲಿ ಕೇವಲ ತ್ರಿಪದಿ ಗಳನ್ನಷ್ಟೇ ಉದಾಹರಣೆಗಾಗಿ ಉಲ್ಲೇಖಿಸ ಲಾಗಿದೆ. ಜನಪದ ಸಾಹಿತ್ಯದ ಇತರ ರೂಪಗಳಾದ ಜನಪದ ಕಥೆಗಳು, ಬಯಲಾಟ ಗಳು, ಗಾದೆಗಳು, ಒಡಪುಗಳು, ಹೇಳಿಕೆಗಳು ಇತ್ಯಾದಿಗಳಲ್ಲೂ ಜೀವನ ಸಂಸ್ಕೃತಿಯ ಸುಗ್ಗಿಯನ್ನೇ ಕಾಣಬಹುದು. ಇಲ್ಲಿ ಕಂಡು ಬರುವ ಜೀವನ ಸಂಸ್ಕೃತಿ ಸಹಜವಾದುದು. ತೋರಿಕೆಯ ಮಾತಿಲ್ಲ. ಅಂತರಂಗವನ್ನೇ ತೆರೆದಿಡುತ್ತದೆ ಈ ಜೀವನ. ●

## ಎಳ್ಳು

'ತಿಲ' ಎಂಬ ಸಂಸ್ಕೃತದ ಹೆಸರಿಂದ ಕರೆಯಲ್ಪಡುವ ಎಳ್ಳು ಪಿಷ್ಟ, ಸಸಾರಜನಕ, ಜಿಡ್ಡು, ಸುಣ್ಣ, ರಂಜಕ, ಕಬ್ಬಿಣ, 'ಎ' ಮತ್ತು 'ಬಿ' ಜೀವಸತ್ವ ಅಂಶಗಳಿರುವ ಆರೋಗ್ಯವರ್ಧಕ ಹಾಗೂ ರೋಗ ನಿವಾರಕ ಗುಣಗಳು ಮೇಳೈಸಿರುವ ಒಂದು ಅದ್ಭುತ ಕಾಳು.

ನಿಶ್ಶಕ್ತಿ, ಯಕೃತ್ತಿನ ತೊಂದರೆ, ಮಾಸಿಕ ಸ್ರಾವದ ತೊಂದರೆ, ರಕ್ತ ಭೇದಿ, ಹೊಟ್ಟೆಯ ಹುಣ್ಣು, ಸುಟ್ಟ ಗಾಯಗಳಿಗೆ ಹಾಗೂ ತಲೆಗೂದಲಿನ ಆರೋಗ್ಯ ಕಾಪಾಡುವಲ್ಲಿ ಎಳ್ಳು ಮಹತ್ತರ ಪಾತ್ರ ವಹಿಸುತ್ತದೆ.

- ಎಳ್ಳಿನ ಬೀಜವನ್ನು ಬಿಸಿ ನೀರಿನಲ್ಲಿ ಒಂದೆರಡು ಗಂಟೆ ನೆನೆಸಿ ಆಮೇಲೆ ಚೆನ್ನಾಗಿ ಅರೆದರೆ ನುಣ್ಣನೆ ಹಿಟ್ಟು ಸಿಗುತ್ತದೆ. ಈ ಹಿಟ್ಟನ್ನು ಎರಡು ಅಥವಾ ಮೂರು ಚಮಚದಷ್ಟು ಪ್ರಮಾಣದಲ್ಲಿ, ಬೆಲ್ಲವನ್ನು ಮಿಶ್ರ ಮಾಡಿ ಹಾಲಿಗೆ ಬೆರೆಸಿ ನಿಯಮಿತವಾಗಿ ಸೇವಿಸುತ್ತಿದ್ದರೆ ನಿಶ್ಶಕ್ತಿ, ರಕ್ತಹೀನತೆ, ಯಕೃತ್ ವೃದ್ಧಿ ಮತ್ತು ಪೋಷಕಾಂಶಗಳ ಅಭಾವದಿಂದ ತಲೆದೋರುವ ರೋಗ ಶಮನಗೊಂಡು ಆರೋಗ್ಯ ಉತ್ತಮವಾಗುತ್ತದೆ.
- ಎಳ್ಳಿನ ಪುಡಿಯನ್ನು ಬಿಸಿನೀರಿನೊಡನೆ ಮುಟ್ಟಿಗೆ ಮೂರು ದಿವಸವಿದೆ ಎನ್ನುವಾಗ ದಿವಸಕ್ಕೆ ಎರಡು ಬಾರಿ ಸೇವಿಸಬೇಕು. ಜೊತೆಗೆ ಒಂದು ಹಿಡಿ ಎಳ್ಳಿನ ಪುಡಿಯನ್ನು ಬಿಸಿ ನೀರಿಗೆ ಬೆರೆಸಿ ಬೆಳಿಗ್ಗೆ ಮತ್ತು ರಾತ್ರಿ 'ಕಟೀ ಸ್ನಾನ' ಅಥವಾ 'ಸೊಂಟದ ಸ್ನಾನ' ಮಾಡಿದರೆ ಮಾಸಿಕ ಸ್ರಾವದ ಸಮಯದಲ್ಲಿ ಹೆಂಗಸರಲ್ಲಿ ಅನುಭವಕ್ಕೆ ಬರುವ ಸೊಂಟದ ನೋವು ಹಾಗೂ ಬೆನ್ನು ನೋವು ಉಪಶಮನವಾಗುತ್ತದೆ.
- ಹುರಿದ ಎಳ್ಳನ್ನು ಪುಡಿಮಾಡಿ ಅರ್ಧ ಚಮಚದಿಂದ ಒಂದು ಚಮಚ ಪುಡಿಯನ್ನು ಹಸುವಿನ ತುಪ್ಪದೊಡನೆ ದಿನಕ್ಕೆ ಮೂರು ಬಾರಿ ಸೇವಿಸಿದರೆ ರಕ್ತಭೇದಿ, ಮಲಬದ್ಧತೆ ಮತ್ತು 'ಡಿ' ಜೀವಸತ್ವದ ಕೊರತೆಯಿಂದ ಉದ್ಭವಿಸುವ 'ರಿಕೆಟ್ಸ್' ಕಾಯಿಲೆಯು ಉಪಶಮನವಾಗುತ್ತದೆ.
- ಅರ್ಧ ಚಮಚ ಹುರಿದ ಎಳ್ಳಿನ ಪುಡಿಯನ್ನು ಹಸುವಿನ ತುಪ್ಪದೊಡನೆ ದಿನಕ್ಕೆ ಮೂರು ಬಾರಿ ಸೇವಿಸಿದರೆ ಅಥವಾ ಎಳ್ಳಿನ ಪುಡಿಯನ್ನು ಬೆಣ್ಣೆಯೊಡನೆ ಸೇವಿಸಿದರೆ ರಕ್ತಸ್ರಾವದಿಂದ ಕೂಡಿದ ಮೂಲವ್ಯಾಧಿಯ ತೊಂದರೆ ಇಲ್ಲವಾಗುತ್ತದೆ.
- ಹೊಟ್ಟೆ ಹುಣ್ಣು, ಮಲಬದ್ಧತೆ ಮತ್ತು ಮೊಳಕೆ ರೋಗ ಇರುವವರು ರಾತ್ರಿ ಮಲಗುವುದಕ್ಕೆ ಮುಂಚೆ ಎರಡು ಅಥವಾ ಮೂರು ಚಮಚ ಎಳ್ಳೆಣ್ಣೆಯನ್ನು ಬಿಸಿ ಹಾಲಿನೊಡನೆ ಸೇವಿಸುವುದರಿಂದ ಹೆಚ್ಚಿನ ಪ್ರಯೋಜನವಾಗುತ್ತದೆ.
- ಅತಿ ಉಷ್ಣದಿಂದ ಕಣ್ಣುನೋವು ಬಂದಾಗ ಕಣ್ಣಿನ ರೆಪ್ಪೆಗಳ ಮೇಲೆ ಎಳ್ಳೆಣ್ಣೆ ಸವರಿದಾಗ ಅಥವಾ ಕಣ್ಣಿನೊಳಗೆ ಬಿಡುವುದರಿಂದ ಉತ್ತಮ ಫಲಿತಾಂಶ ಸಿಗುತ್ತದೆ.
- ಸುಟ್ಟ ಗಾಯಗಳಿಗೆ ಎಳ್ಳೆಣ್ಣೆ ಸವರುವುದರಿಂದ ಗಾಯ ಬೇಗನೆ ವಾಸಿಯಾಗುತ್ತದೆ. ಜೊತೆಗೆ ಚಳಿಗಾಲದಲ್ಲಿ ಚರ್ಮ ಬಿರಿಯುವುದನ್ನು ತಪ್ಪಿಸಲು ಎಳ್ಳೆಣ್ಣೆಯನ್ನು ಸವರಬೇಕು. ಅಭ್ಯಂಜನ ಸ್ನಾನ ಮಾಡುವಾಗ ಬೇರೆ ಎಣ್ಣೆಗಳಿಗೆ ಬದಲಾಗಿ ಎಳ್ಳೆಣ್ಣೆಯನ್ನು ತಲೆಗೆ, ಮೈಗೆ ಹಚ್ಚಿಕೊಂಡು ಸ್ನಾನ ಮಾಡಿದರೆ ಚರ್ಮದ ಆರೋಗ್ಯ ವೃದ್ಧಿಯಾಗುವುದಲ್ಲದೆ ವಾತದ ಸಮಸ್ಯೆಯೂ ನಿವಾರಣೆಯಾಗುತ್ತದೆ.







# ಗ್ರಾಮೀಣ ಪ್ರದೇಶದಲ್ಲಿ ಸಂಕ್ರಾಂತಿಯ ಆಚರಣೆಗಳು

- ಎಚ್.ಎಸ್. ಸಿದ್ಧಗಂಗಪ್ಪ
53/1, 'ಶಿವಕೃಪ' ಕಾವೇರಿ ಬಡಾವಣೆ,
ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು-40

"ಸಾಮಾನ್ಯವಾಗಿ ಪ್ರತಿವರ್ಷ ಸಾಮಾಜಿಕ ಕ್ಷೇಮಕ್ಕಾಗಿ ವಿಶೇಷ ಸಂದರ್ಭದಲ್ಲಿ ಆಚರಿಸುವ ಜಾನಪದ ಸಂಗತಿಗಳ ಮತ್ತು ಸಂಪ್ರದಾಯಗಳ ಸಮ್ಮಿಶ್ರ, ಜಟಿಲ ಘಟಕವೇ ಹಬ್ಬ." ಹಬ್ಬಗಳು ವ್ಯಕ್ತಿಯ ಬದುಕಿನಲ್ಲಿ ಅವಿಭಾಜ್ಯ ಅಂಗಗಳಾಗಿ ಬೆಳೆದು ಬಂದಿವೆ, ಉಳಿದು ಬಂದಿವೆ. ಬಹುತೇಕ ಹಿಂದುಗಳೆಲ್ಲರೂ ಆಚರಿಸುವ ಯುಗಾದಿ, ಗೌರಿ ಗಣೇಶ, ವಿಜಯದಶಮಿ, ದೀಪಾವಳಿ, ಮಹಾಶಿವರಾತ್ರಿ ಮುಂತಾದ ಹಬ್ಬಗಳ ಸಾಲಿನಲ್ಲಿ ಬರುವ ಮತ್ತೊಂದು ವಿಶಿಷ್ಟವಾದ ಹಬ್ಬ 'ಮಕರ ಸಂಕ್ರಾಂತಿ'. ಇದನ್ನು 'ಉತ್ತರಾಯಣ ಪುಣ್ಯಕಾಲ', 'ದೇವಾಯನಕಾಲ', ಎಂದು ಕರೆಯುತ್ತಾರೆ. 'ಸಂಕ್ರಾಂತಿ' ಎಂದರೆ ಉಜ್ವಲವಾದ ಬೆಳಕು, ಜೀವನದ ಹೊಸ ತಿರುವು ಎಂದರ್ಥ. ಸೂರ್ಯನು ಧನಸ್ಸು ರಾಶಿಯನ್ನು ಬಿಟ್ಟು ಮಕರರಾಶಿಯನ್ನು ಸೇರುವ ಶುಭ ಸಂದರ್ಭ.

> 'ಮಕರ ಸಂಕ್ರಾಂತಿ'ಯನ್ನು 'ಉತ್ತರಾಯಣ ಪುಣ್ಯಕಾಲ', 'ದೇವಾಯನ ಕಾಲ' ಎಂದೂ ಕರೆಯುತ್ತಾರೆ. 'ಸಂಕ್ರಾಂತಿ' ಎಂದರೆ ಉಜ್ವಲವಾದ ಬೆಳಕು, ಜೀವನದ ಹೊಸ ತಿರುವು ಎಂದರ್ಥ. ಸೂರ್ಯನು ಧನಸ್ಸು ರಾಶಿಯನ್ನು ಬಿಟ್ಟು ಮಕರ ರಾಶಿಯನ್ನು ಸೇರುವ ಸಂದರ್ಭ. ಸಂಕ್ರಾಂತಿ ಹಬ್ಬದ ವೈಶಿಷ್ಟ್ಯವೆಂದರೆ, ಎಳ್ಳು-ಬೆಲ್ಲದ ಕೊಡು-ಕೊಳ್ಳುವಿಕೆ. ಎಳ್ಳಿನ ದಾನಕ್ಕೆ ಹೆಚ್ಚು ಮಹತ್ವ. ಎಳ್ಳನ್ನು ದಾನ ಮಾಡುವುದರಿಂದ ಪಾಪ ಕಳೆಯುತ್ತದೆ, ಕಷ್ಟ ಪರಿಹಾರವಾಗುತ್ತದೆ ಎಂಬ ನಂಬಿಕೆ. ಎಳ್ಳು ಪೀಡೆಯ ಪರಿಹಾರಕ್ಕೆ ಎಂಬುದು ಮೂಲ ಉದ್ದೇಶವಾದರೂ, 'ಎಳ್ಳು ತಿಂದು ಒಳ್ಳೆಯ ಮಾತನಾಡು' ಎನ್ನುವ ಹಾಗೆ ಪ್ರೀತಿಯ ಸಂಕೇತವೂ ಆಗಿದೆ.

ಪುರಾಣ ಪುಣ್ಯ ಕಥೆಗಳಲ್ಲಿ ಸಂಕ್ರಾಂತಿ ಹಬ್ಬದ ಪ್ರಸ್ತಾಪವಿದೆ. ಸಂಕ್ರಾಂತಿಯ ದಿನ ಸಾವು ಬಂದರೆ ಸ್ವರ್ಗ ಪ್ರಾಪ್ತಿ ಎಂಬ ನಂಬಿಕೆ. ಈ ನಂಬಿಕೆಯಿಂದಲೇ ಇರಬೇಕು. ಸಂಪ್ರದಾಯಸ್ಥರು ಸಾವು ಬಂದರೆ ಸಂಕ್ರಾಂತಿ ದಿನ ಬರಲಿ ಎಂದು ದೇವರನ್ನು ಪ್ರಾರ್ಥಿಸುವುದು. ಇಚ್ಛಾಮರಣಿಯಾದ ಭೀಷ್ಮಾಚಾರ್ಯರು ರಣರಂಗದಲ್ಲಿ ಬಾಣಗಳ ಮಂಚದ ಮೇಲೆ ಮಲಗಿ ಯಾತನೆಯನ್ನು ಅನುಭವಿಸುತ್ತಿದ್ದರೂ, ಉತ್ತರಾಯಣ ಪುಣ್ಯಕಾಲದ ಶುಭ ಘಳಿಗೆಗಾಗಿ ಕಾದು ಮರಣವನ್ನಪ್ಪಿದ ಬಗ್ಗೆ ಕೇಳಿದ್ದೇವೆ. ಸಂಕ್ರಾಂತಿ ದಿನದಿಂದ ದೇವತೆಗಳಿಗೆ ಹಗಲು, ರಾಕ್ಷಸರಿಗೆ ರಾತ್ರಿಯಾಗುವುದೆಂಬುದು ಮತ್ತೊಂದು ನಂಬಿಕೆ.

**ವಿದೇಶಗಳಲ್ಲಿ**

ಸಂಕ್ರಾಂತಿ ಹಬ್ಬವನ್ನು ಭಾರತದಲ್ಲಿ ಅಲ್ಲದೆ, ವಿದೇಶಗಳಲ್ಲಿಯೂ, ಬೇರೆ ಬೇರೆ ಹೆಸರಿನಿಂದ ವಿಭಿನ್ನ ರೀತಿಯಲ್ಲಿ ವಿಭಿನ್ನ ದೃಷ್ಟಿಯಲ್ಲಿ ಆಚರಿಸುವುದು ತಿಳಿದು ಬರುತ್ತದೆ. ಗ್ರೀಕರು ಸಂಕ್ರಾಂತಿಯನ್ನು 'ಬೇಕನ್' ಎಂಬ ಹೆಸರಿನಿಂದ ಜಲ ಸಮೃದ್ಧಿಗಾಗಿ, ಸಸ್ಯ ಫಲಾಭಿವೃದ್ಧಿಗಾಗಿ ಆಚರಿಸಿದರೆ, ಈಜಿಪ್ಟ್‌ನಲ್ಲಿ 'ನಮ್‌ಫೆಸ್ಟಿವಲ್'', ರೋಮ್‌ನಲ್ಲಿ 'ಬ್ಯಾಕಸ್ ಡೇ' ಎಂಬ ಹೆಸರಿನಿಂದ ಆಚರಿಸುತ್ತಾರೆ. ರೋಮ್ ಭಾಷೆಯಲ್ಲಿ 'ಬ್ಯಾಕಸ್' ಎಂದರೆ ಮನ್ಮಥ ಎಂದು ಅರ್ಥ. ವಿವಾಹಿತ ಸ್ತ್ರೀಯರು ಸಂತಾನ ಪ್ರಾಪ್ತಿಗಾಗಿ ಮನ್ಮಥನನ್ನು ಆರಾಧಿಸಿದರೆ, ಅವಿವಾಹಿತ ಸ್ತ್ರೀಯರು ಉತ್ತಮ ಗಂಡನನ್ನು ದೊರಕಿಸಿಕೊಡುವಂತೆ ಪ್ರಾರ್ಥಿಸುತ್ತಾರೆ. ಸ್ವೀಡನ್‌ನಲ್ಲಿ ಜನವರಿ ತಿಂಗಳ ಮಧ್ಯಭಾಗದಲ್ಲಿ ಗತಿಸಿದ ಹಿರಿಯರನ್ನು ನೆನಪಿಸಿಕೊಳ್ಳುವುದಕ್ಕಾಗಿ ಆಚರಿಸುತ್ತಾರೆ.

**ವೈಶಿಷ್ಟ್ಯ**

ಸಂಕ್ರಾಂತಿ ಹಬ್ಬದ ವೈಶಿಷ್ಟ್ಯವೆಂದರೆ ಎಳ್ಳು ಬೆಲ್ಲದ ಕೊಡು ಕೊಳ್ಳುವಿಕೆ. ಎಳ್ಳಿನ ದಾನಕ್ಕೆ ಹೆಚ್ಚು ಮಹತ್ವ. ಎಳ್ಳನ್ನು ದಾನ ಮಾಡುವುದರಿಂದ ಪಾಪ ಕಳೆಯುತ್ತದೆ. ಕಷ್ಟ ಪರಿಹಾರವಾಗುತ್ತದೆ ಎಂಬ ನಂಬಿಕೆ. ಎಳ್ಳು ಪೀಡೆಯ ಪರಿಹಾರಕ್ಕೆ ಎಂಬುದು ಮೂಲ ಉದ್ದೇಶವಾದರೂ, 'ಎಳ್ಳು ತಿಂದು ಒಳ್ಳೆಯ ಮಾತನಾಡು'' ಎನ್ನುವ ಹಾಗೆ ಪ್ರೀತಿಯ ಸಂಕೇತವೂ ಆಗಿದೆ. ಅದನ್ನು ವಿತರಿಸುವ ಸಲುವಾಗಿ ಪ್ರೀತಿ ಪಾತ್ರರ, ಸ್ನೇಹಿತರ ಭೇಟಿ, ಯೋಗ ಕ್ಷೇಮದ ವಿನಿಮಯ ಜರುಗುತ್ತದೆ. ಎಷ್ಟೋ ವೇಳೆ ಬೀರಬೇಕಾದ ಎಳ್ಳನ್ನು ವಾರಗಳ ನಂತರ, ತಿಂಗಳ ನಂತರ, ನೆಂಟರಿಷ್ಟರ ಮನೆಗೆ ತಲುಪಿಸುವುದುಂಟು. ಇತ್ತೀಚೆಗೆ ಅಂಚೆ ಮೂಲಕ ದೂರದ ಊರಿನಲ್ಲಿರುವವರಿಗೆ ಕಳುಹಿಸುವ ಪರಿಪಾಠ ಬೆಳೆದು ಬಂದಿದೆ.

ಮೂಲ ಉದ್ದೇಶ ಒಂದೇ ಆದರೂ ಆಚರಿಸುವ ವಿಧಿ ವಿಧಾನಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗುತ್ತಾ ಹೋಗುತ್ತದೆ. ಕೆಲವು ಕಡೆ ಮಕ್ಕಳನ್ನು ಕೂರಿಸಿ ಎಲಚಿ ಹಣ್ಣು, ಅವರೆ ಕಾಯಿ, ಕಡ್ಲೇಕಾಯಿ, ಕಬ್ಬಿನ ಚೂರು, ಬೆಲ್ಲ ಇವುಗಳನ್ನು ಬೆರೆಸಿ ಪಾವಿನಲ್ಲಿ ತುಂಬಿ ಮುತ್ತೈದೆಯರು ತಲೆಯ ಮೇಲೆ ಸುರಿದು ಶುಭವಾಗಲೆಂದು ಹರಸುತ್ತಾರೆ. ಹೀಗೆ ಮಾಡುವುದರಿಂದ ಮಕ್ಕಳಿಗೆ ಬರಬಹುದಾದ ಪೀಡೆ ತೊಲಗುತ್ತದೆ



ಎಂಬ ನಂಬಿಕೆ. ಮನೆಗೆ ಬಂದವರಿಗೆ ಎಲೆ ಅಡಿಕೆ, ಕಬ್ಬಿನ ತುಂಡು, ಎಳ್ಳು ಬೆಲ್ಲವನ್ನು ಕೊಡುವ ಸಂಪ್ರದಾಯ.



ಹೊಸದಾಗಿ ಮದುವೆಯಾದ ಹೆಣ್ಣು ಮಕ್ಕಳು ಮೊದಲ ಸಂಕ್ರಾಂತಿಯಿಂದ ಪ್ರಾರಂಭಿಸಿ ಐದು ವರ್ಷಗಳ ಕಾಲ ಎಳ್ಳು, ಬಾಳೆ ಹಣ್ಣು, ಕೊಬ್ಬರಿ ಬಟ್ಟಲು, ಕಬ್ಬು, ಮಣ್ಣಿನ ಕುಡಿಕೆ, ಧಾನ್ಯಗಳು ಇವುಗಳಿಂದ ಕೂಡಿದ ಬಾಗಿನವನ್ನು ಮೂರು ಅಥವಾ ಐದು ಜನ ಮುತ್ತೈದೆಯರಿಗೆ ಕೊಡುವ ಪದ್ಧತಿ. ವರ್ಷ ವರ್ಷಕ್ಕೆ ಪದಾರ್ಥಗಳ ಪ್ರಮಾಣವನ್ನು ಐದರಂತೆ ಹೆಚ್ಚಿಸುತ್ತಾರೆ. ಚೊಚ್ಚಲು ಮಗುವನ್ನು ಹಡೆದ ತಾಯಂದಿರು ಗಂಡು ಮಗುವಾದರೆ ಕೃಷ್ಣನ ಬೆಳ್ಳಿಯ ವಿಗ್ರಹವನ್ನು, ಹೆಣ್ಣು ಮಗುವಾದರೆ ಬೆಳ್ಳಿಯ ಬಟ್ಟಲನ್ನು ಎಳ್ಳಿನ ಜೊತೆ ಬೀರುತ್ತಾರೆ. ಆದರೆ ಈ ಸಂಪ್ರದಾಯ ಬರು ಬರುತ್ತಾ ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತಿದೆ.

**ಹಬ್ಬದ ಸಿದ್ಧತೆ**

ಸಂಕ್ರಾಂತಿ ಹಬ್ಬ ಇನ್ನು ಒಂದು ವಾರ ಇರುವಾಗಲೇ ಹೆಣ್ಣು ಮಕ್ಕಳು ಹಬ್ಬದ ಸಿದ್ಧತೆಯಲ್ಲಿ ತೊಡಗುತ್ತಾರೆ. ಕರಿಯ ಎಳ್ಳನ್ನು ತಂದು ಕಲ್ಲು ಮಣ್ಣನ್ನು ಬೇರ್ಪಡಿಸಿ, ನೀರಿನಲ್ಲಿ ನೆನೆಸಿ, ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ, ಕಲ್ಲಿನ ಮೇಲೆ ಅಥವಾ ಗೋಣಿ ಚೀಲದ ಮೇಲೆ ಉಜ್ಜಿ ಕರಿಯ ಹೊದಿಕೆಯನ್ನು ಬೇರ್ಪಡಿಸುತ್ತಾರೆ. (ಈಗ ಬಿಳಿ ಎಳ್ಳು ಸಿಗುವುದರಿಂದ ಮೊದಲಿನ ಹಾಗೆ ತೊಂದರೆ ಪಡುವಂತಿಲ್ಲ.') ಕಡಲೆ ಕಾಯಿಯನ್ನು ಸುಲಿದು ಬೀಜವನ್ನು ಹುರಿದು ಪಪ್ಪುಗಳನ್ನಾಗಿ ಮಾಡಿ, ಬೆರೆಸಿ ಎಳ್ಳು ಬೆಲ್ಲವನ್ನು ತಯಾರಿಸುತ್ತಾರೆ. ಈಗ ಅಂಡಗಿಗಳಲ್ಲಿ ಎಲ್ಲಾ ರೆಡಿಮೇಡ್ ವಸ್ತುಗಳು ದೊರೆಯುವುದರಿಂದ ಮೊದಲಿನ ಹಾಗೆ ಕಷ್ಟಪಡುವುದು ಕಡಿಮೆಯಾಗಿದೆ.

ಹಬ್ಬವೆಂದರೆ ಕೇಳಬೇಕೆ ಮನೆಯನ್ನೆಲ್ಲಾ ಒಪ್ಪ ಮಾಡಿ, ಸಾರಿಸಿ, ಮನೆಯ ಒಳಗೆ ಹೊರಗೆ ರಂಗೋಲಿ ಬಿಡುತ್ತಾರೆ. ರಂಗೋಲಿ ಬಿಡುವುದೆಂದರೆ ಹೆಣ್ಣು ಮಕ್ಕಳಿಗೆ ಬಲು ಹಿಗ್ಗು. ತಮ್ಮಲ್ಲಿರುವ ಪ್ರತಿಭೆಯನ್ನು ಅಭಿವ್ಯಕ್ತಿಪಡಿಸಲು ಸುಸಂಧಿ. ಬಣ್ಣ ಬಣ್ಣದಿಂದ ಕೂಡಿದ ವಿವಿಧ ರೀತಿಯ ರಂಗೋಲಿಯನ್ನು ಬಿಡುತ್ತಾರೆ. ಆಂಧ್ರ ಮತ್ತು ತಮಿಳುನಾಡಿನಲ್ಲಿ ರಂಗೋಲಿಗೆ ವಿಶಿಷ್ಟ ಸ್ಥಾನ. ಡಿಸೆಂಬರ್ ೧೪ ರಿಂದ ಜನವರಿ ೧೪ರ ವರೆಗೆ ಒಂದು ತಿಂಗಳ ಕಾಲ ರಂಗೋಲಿಯ ಸುಗ್ಗಿ. ಈ ಅವಧಿಯನ್ನು ಕನ್ನಡದಲ್ಲಿ 'ಪುಷ್ಯ' ಮಾಸವೆಂದೂ, ತೆಲುಗಿನಲ್ಲಿ 'ಧನುರ್ಮಾಸ', ತಮಿಳಿನಲ್ಲಿ 'ಮಾರ್ಗಳಿ' ಮಾಸ ಎಂದು ಕರೆಯುತ್ತಾರೆ. ಕರ್ನಾಟಕದಲ್ಲಿ ಕೆಲವು ಕಡೆ ಸಂಪ್ರದಾಯಸ್ಥರು ಒಂದು ತಿಂಗಳ ಕಾಲ ಬೆಳಗಿನ ಜಾವ ಕೋಳಿ ಕೂಗುವ ಮುನ್ನವೇ ಎದ್ದು ಮನೆಯನ್ನು ಸಾರಿಸಿ, ರಂಗೋಲಿ ಬಿಟ್ಟು ಸ್ನಾನ ಮಾಡಿ, ಎಡೆ ಮಾಡಿ, ದೇವರ ಪೂಜೆಯನ್ನು ಬೆಳಗಾಗುವ ಮುನ್ನ ಮಾಡುತ್ತಾರೆ. ಈ ಮಾಸದಲ್ಲಿ ಪಾರ್ವತಿ ಪರಮೇಶ್ವರರು ದೇಶ ಸಂಚಾರಕ್ಕೆ ಬರುತ್ತಾರೆಂಬ ನಂಬಿಕೆ. ಆಂಧ್ರ ಮತ್ತು ತಮಿಳುನಾಡಿನಲ್ಲಿ ಒಂದು ತಿಂಗಳ ಕಾಲ ವಿಶೇಷ ಹಾಗೂ ವಿಶಿಷ್ಟವಾಗಿ ರಂಗೋಲಿ ಬಿಡುತ್ತಾರೆ. ಸಂಕ್ರಾಂತಿ ದಿನ ತಮಿಳುನಾಡಿನಲ್ಲಿ ದೇವರ ಮುಂದೆ ಮಡಿಕೆ ರಂಗೋಲಿ ಇಡುತ್ತಾರೆ. ಹೊರಗಡೆ ಪೂರ್ವದಿಕ್ಕಿಗೆ ಸಾರಿಸಿ ರಂಗೋಲಿ ಹಾಕಿ ಅದರ ಮೇಲೆ ಒಲೆಯನ್ನು ನಿರ್ಮಿಸಿ, ಮಡಿಕೆಯಲ್ಲಿ ಸೀಪೊಂಗಲ್ ಮಾಡಿ ಸೂರ್ಯನಿಗೆ ನೈವೇದ್ಯ ಮಾಡುತ್ತಾರೆ. ಆ ಸಂದರ್ಭದಲ್ಲಿ ಸೂರ್ಯ ಹಾಗೂ ಮಡಿಕೆಯ ರೀತಿ ರಂಗೋಲಿ ಇಡುತ್ತಾರೆ.

ನಮ್ಮ ಜನಪದರ ದೃಷ್ಟಿಯಲ್ಲಿ ಸಂಕ್ರಾಂತಿ ಎಂದರೆ 'ಸಂಕಲಾತಮ್ಮ', 'ಸುಂಕಲಮ್ಮ' ಎಂಬ ದೇವತೆಯ ಆರಾಧನೆ. ಆಕೆಯ ವಕ್ರ ದೃಷ್ಟಿ ಬಿದ್ದ ಕಡೆ ಯಾವುದೇ ವಸ್ತುವಿರಲಿ ಹಾನಿಗೊಳಗಾಗುವುದೆಂಬ ನಂಬಿಕೆ. ಅದಕ್ಕೆ ಆಕೆಯ ಕೆಟ್ಟ ದೃಷ್ಟಿ ಬೀಳದಿರಲೆಂದು ಭತ್ತ, ರಾಗಿ, ಜೋಳ, ಇತ್ಯಾದಿ ಮೆದೆಗಳಿಗೆ, ಮನೆಯ ಬಾಗಿಲು, ಕಿಟಕಿ, ಜಂತೆ, ಮುಂತಾದ ಕಡೆ, ಗದ್ದೆ ಹೊಲಗಳ ಮೂಲೆ ಮೂಲೆಗೂ ಉತ್ತರಾಣೆ, ಬೇವು, ಮಾವಿನ ಸೊಪ್ಪಿನ ಕಟ್ಟನ್ನು ಇಡುತ್ತಾರೆ. 'ಸಂಕಲಾತಮ್ಮ'' ನನ್ನು ಸಂತೃಪ್ತಿ ಪಡಿಸಲು ಈ ಹಬ್ಬದ ಉದ್ದೇಶ ಎಂಬ ಪ್ರತೀತಿ.

**ಸುಗ್ಗಿ ಹಬ್ಬ**

ಗ್ರಾಮೀಣರ ದೃಷ್ಟಿಯಲ್ಲಿ ಜೀವನೋತ್ಸಾಹವನ್ನು ತಂದು ಕೊಡುವ ಸುಗ್ಗಿ ಹಬ್ಬ. ಅವರು ವರ್ಷದ ಮೊದಲ ಹಬ್ಬವಾದ ಯುಗಾದಿಯನ್ನು, ಕೊನೆಯ ಹಬ್ಬವಾದ ಸಂಕ್ರಾಂತಿಯನ್ನು ಸಂತೋಷ, ಸಂಭ್ರಮದಿಂದ



ಆಚರಿಸುತ್ತಾರೆ. ಸಂಕ್ರಾಂತಿಯ ಸಂದರ್ಭದಲ್ಲಿ ರೈತ ಹಿಡಿಯಾಗಿ ಬಿತ್ತಿದ ಕಾಳು ಆಳೆತ್ತರದ ರಾಶಿಯಾಗಿ ಮನೆ ಸೇರುವ ಕಾಲ. ಆಗ ಅವರಿಗೆ ಬಿಡುವಿರುವುದರಿಂದ ಸಂಕ್ರಾಂತಿಯನ್ನು ಸುಗ್ಗಿಯ ಹಬ್ಬವಾಗಿ, ಸಡಗರದಿಂದಲೇ ಆಚರಿಸುತ್ತಾರೆ. ಕೃಷಿ ಕಾರ್ಯದುದ್ದಕ್ಕೂ ತಮ್ಮೊಂದಿಗೆ ಶ್ರಮವನ್ನು ಹಂಚಿಕೊಂಡು ಸಹಕರಿಸಿದ ದನಗಳಿಗೆ ಕೃತಜ್ಞತೆಯನ್ನು ಸಲ್ಲಿಸಲು ಇದು ಶುಭ ಸಂದರ್ಭ. ದನಗಳ ಬಗ್ಗೆ ತಮಗಿರುವ ಪ್ರೀತಿ, ವಿಶ್ವಾಸ, ಆತ್ಮೀಯತೆ, ಗೌರವಗಳನ್ನು ಜನಪದ ತ್ರಿಪದಿಗಳ ಮೂಲಕ ಹೀಗೆ ಅಭಿವ್ಯಕ್ತಪಡಿಸಿದ್ದಾರೆ ;

**ಬೆಳೆಯಾಗಿ ಬಂದೈತಿ ಬಸವಣ್ಣ ನಿಮ್ಮ ದಯದಿಂದ**
**ಹರ್ತೀಯ ಜಾತುರಿಗೆ ಹೋಗ್ತೀನಿ - ನಿಮಗಾಗಿ**
**ಹುರಿಗೆಜ್ಜೆ ಗಂಟೆ ತರತೀನಿ**

ಮನೆಯಲ್ಲಿರುವ ದನಕರುಗಳನ್ನು ಚೆನ್ನಾಗಿ ಮೈ ತೊಳೆಯುತ್ತಾರೆ. ಎತ್ತುಗಳಿಗೆ ವಿಶೇಷವಾದ ಅಲಂಕಾರ. ಅವುಗಳ ಕೊಂಬು ಎರೆದು ಬಣ್ಣವನ್ನು ಹಚ್ಚುತ್ತಾರೆ. ಕೊರಳಿಗೆ ಕರಿದಾರವನ್ನು ಸೇರಿಸಿ ಕಟ್ಟಿದ ಶಂಖು, ಗಂಟೆ, ಗಗ್ಗರ ಕಟ್ಟುತ್ತಾರೆ. ಕೊಂಬಿನ ತುದಿಗೆ ನಿಂಬೆ ಹಣ್ಣನ್ನು ಚುಚ್ಚುತ್ತಾರೆ. ತಮ್ಮ ಸುತ್ತ ಮುತ್ತಲಿನ ಪರಿಸರದಲ್ಲಿ ಬೆಳೆದ ಬಣ್ಣ ಬಣ್ಣದ ಹೂವಿನಿಂದ ಕಟ್ಟಿದ ಹಾರವನ್ನು ಕೊರಳಿಗೆ ಹಾಕುತ್ತಾರೆ. ದಂಡೆಯನ್ನು ಕಟ್ಟಿ ಕೊಂಬಿಗೆ ಕಟ್ಟುತ್ತಾರೆ.









ಹೀಗೆ ಅಲಂಕರಿಸಿದ ದನಕರುಗಳನ್ನು ಊರ ಹೊರಗಿನ ಗೋಮಾಳಕ್ಕೆ ಅಥವಾ ಬಯಲಿಗೆ ಹೊಡೆದುಕೊಂಡು ಹೋಗುತ್ತಾರೆ. ನಂತರ ದನಕರುಗಳನ್ನು ಬಲಗಡೆಯಿಂದ ಹುತ್ತವನ್ನು ಒಂದು ಸುತ್ತು ಬಳಸಿಕೊಂಡು 'ಪೊಂಗಲೋ' ಎಂದು ಕೂಗುತ್ತಾ ಪೊಂಗಲನ್ನು ಎರಚುತ್ತಾರೆ. ಆ ವೇಳೆಗಾಗಲೇ ಸಂಜೆ ಆಗಿರುತ್ತದೆ. ಊರಿನ ಹೆಬ್ಬಾಗಿಲಿನಲ್ಲಿ ಕಿಚ್ಚು ಹಾಕುತ್ತಾರೆ. ಕಿಚ್ಚನ್ನು ಅಡ್ಡಡ್ಡವಾಗಿ ರಸ್ತೆಯ ಎರಡು ಬದಿಯೂ ಕೂಡಿಕೊಳ್ಳುವಂತೆ ಬತ್ತದ ಹುಲ್ಲನ್ನು ಹಾಕಿ ಒಂದೇ ಸಲಕ್ಕೆ ಎಲ್ಲ ಹುಲ್ಲು ಹತ್ತಿಕೊಳ್ಳುವಂತೆ ಬೆಂಕಿ ಹಾಕುತ್ತಾರೆ. ಕೆಲವು ಕಡೆ ಒಣಗಿದ ಸೊಪ್ಪು, ಎಲೆಯನ್ನು ಹರಡಿ ಬೆಂಕಿ ಹಚ್ಚುವುದೂ ಉಂಟು. ಕಿಚ್ಚು ಹಾಕಿರುವುದು ಕಾಣಿಸಿದ ಕೂಡಲೇ ದನಕರುಗಳನ್ನು ಓಡಿಸಿಕೊಂಡು ಹೋಗುತ್ತಾರೆ. ದನಗಳು ಓಡುವಾಗ ಕೊರಳಿಗೆ ಕಟ್ಟಿದ ಗಗ್ಗರ, ಗೆಜ್ಜೆಯ ಧ್ವನಿ ಕಿವಿಗೆ ಇಂಪು. ಅವುಗಳ ನಾಗಾಲೋಟಕ್ಕೆ ಚಿಮ್ಮುವ ಧೂಳು ಮುಗಿಲೆತ್ತರಕ್ಕೆ ವ್ಯಾಪಿಸಿರುತ್ತದೆ. ಈ ಸನ್ನಿವೇಶವನ್ನು ಜನಪದರು ;

**ಆರು ಸಾವಿರ ಜಂಗು ಮೂರು ಸಾವಿರ ಗಂಟೆ**
**ದೂರ ಕೇಳ್ಯಾವು ಗಗನಕೆ - ನಮ್ಮ ಬಸವ**
**ಧೂಳು ಎಬ್ಬಿಸ್ಯಾನೊ ಶಿವನೀಗ**

ಎಂದು ವರ್ಣಿಸಿದ್ದಾರೆ. ಬಣ್ಣ ಬಣ್ಣದ ಚಾವಟಿ ಇರುವ ಬಾರಕೋಲನ್ನು ಮೇಲಕ್ಕೆತ್ತಿ 'ಕಾಕಾ' ಹಾಕುತ್ತಾ ಓಡಿಸಿಕೊಂಡು ಹೋಗುವಾಗಿನ ದೃಶ್ಯ ನೋಡಲು ಮನಮೋಹಕ. ನಾಲ್ಕೈದು ಕಡೆ ಹೀಗೆಯೇ ಕಿಚ್ಚು ಹಾಕಿ ಹಾಯಿಸುತ್ತಾರೆ. ದನಗಳು ಅವೆಲ್ಲ ವನ್ನೂ ದಾಟಿ ಹೋಗಿ ದೇವರ ಗುಡಿಯನ್ನು ಒಂದು ಸುತ್ತು ಬಳಸಿಕೊಂಡು ಹೋಗುವಂತೆ ಮಾಡು ತ್ತಾರೆ. ಕೆಲವು ಕಡೆ ಕುರಿಗಳನ್ನು ಕಿಚ್ಚು ಹಾಯಿಸುವುದುಂಟು. ಕಿಚ್ಚು ಹಾಯಿ ಸುವ ಮೂಲ ಉದ್ದೇಶ ಕಾರ್ತೀಕದಲ್ಲಿ ಚೆನ್ನಾಗಿ ಮೇದು ಸೊಗಸಾದ ದನಕರುಗಳಿಗೆ ಕಣ್ಣೆಸರಾಗದಿರಲೆಂಬ ಕಾರಣ ಒಂದಾದರೆ, ಈ ಉರಿಯ ಸೋಂಕಿಗೆ ಸಾಂಕ್ರಾಮಿಕ ರೋಗಗಳು ನಾಶವಾಗಲೆಂಬುದು ಮತ್ತೊಂದು ಆಶಯ ಇರಬಹುದೇನೋ. ಕಿಚ್ಚಿನ ಬೂದಿಯನ್ನು ಒಂದು ಹಿಡಿಯಷ್ಟು ತೆಗೆದುಕೊಂಡು ಮನೆಗೆ ಹೋಗಿ ಮನೆಯಲ್ಲಿರುವ ಜಾನುವಾರುಗಳ ಮೈ ತಿಕ್ಕುತ್ತಾರೆ. ಮನೆ ಮಂದಿಯೆಲ್ಲ ಹಣೆಗೆ ಇಟ್ಟುಕೊಳ್ಳುತ್ತಾರೆ. ಹೀಗೆ ಬೂದಿಯನ್ನು ಇಟ್ಟುಕೊಳ್ಳುವುದರಿಂದ ದೋಷ ಪರಿಹಾರವಾಗುತ್ತದೆಂಬ ನಂಬಿಕೆ. ಅಲ್ಲದೆ ಜಾನುವಾರುಗಳು ದಾಟಿದ ಬೂದಿ ಪವಿತ್ರ ಎಂಬ ಪ್ರತೀತಿ.



**ಉತ್ತರ ಕರ್ನಾಟಕ**

ಉತ್ತರ ಕರ್ನಾಟಕದಲ್ಲಿ ಸಂಕ್ರಾಂತಿಯ ದಿನ ಹೊಳಿಸ್ನಾನಕ್ಕೆ ಹೋಗುವ ಪದ್ಧತಿ ಇದೆ. ಅಂದು ಎಳ್ಳು ಪುಡಿ, ಅರಿಶಿಣವನ್ನು ಮೈಗೆ ಹಚ್ಚಿಕೊಂಡು ಸ್ನಾನ ಮಾಡುತ್ತಾರೆ. ಎಳ್ಳು ಹಚ್ಚಿದ ಸಜ್ಜೆ ರೊಟ್ಟಿ, ಬದನೇಕಾಯಿ ಭರ್ತ, ಅಂದಿನ ವಿಶೇಷ ಅಡುಗೆ. ಇವುಗಳ ಬಗ್ಗೆ 'ಸಜ್ಜೆ ರೊಟ್ಟಿ ಬರ್ತ ಕೈಗೆ ಬಾಯಿಗೆ ಚುರ್ತ' ಎನ್ನುವ ಗಾದೆ ಮಾತು ಇದೆ. ಇವುಗಳ ಜೊತೆ 'ಮಾದ್ಲಿ ಮಳಿಕೆ ಉಸುಳಿ' ಗಳನ್ನು ಮಾಡುವುದೂ ಉಂಟು. ಸಂಜೆ ಎಳ್ಳು ಸೇಂಗಾ ಬೆಲ್ಲವನ್ನು ಸೇರಿಸಿ ತಮ್ಮ ಆಪ್ತೇಷ್ಟರಿಗೆ "ನಾವೂ ನೀವು ಎಳ್ಳು ಬೆಲ್ಲದಾಂಗ ಸಿಹಿಯಾಗಿ ಇರೋಣ" ಎಂದು ಹಂಚುತ್ತಾರೆ.

**ದಕ್ಷಿಣ ಕರ್ನಾಟಕ**

ದಕ್ಷಿಣ ಕರ್ನಾಟಕದ ಬಹುತೇಕ ಕಡೆ ಅವರೇ ಬೇಳೆ ಕಿಚಡಿ, ಕಾಯಾಲು ಮಾಡುತ್ತಾರೆ. ಜೊತೆಗೆ ಅವರೇಕಾಯಿ ಮತ್ತು ಕಡಲೇಕಾಯಿ, ಎಲೆಗೆಣಸನ್ನು ಬೇಯಿಸುತ್ತಾರೆ. ಹಸಿ ಅವರೇ ಕಾಳಿನಿಂದ ಮೇಲೋಗರ ಮಾಡುತ್ತಾರೆ. ಸಂಕ್ರಾಂತಿ ದಿನ ಎಲಚಿ ಹಣ್ಣು ಮತ್ತು ಸೊಪ್ಪಿನ ಕಡಲೆ ಕಾಯಿ ತಿನ್ನದೆ ಹೋದರೆ ಕತ್ತೆ ಕಿವಿಯಾಗುತ್ತದೆಂಬ ನಂಬಿಕೆಯೂ ಇದೆ.

ತಮಿಳುನಾಡು, ಆಂಧ್ರದಲ್ಲಿ ಸಂಕ್ರಾಂತಿಯನ್ನು ಅದ್ದೂರಿಯಿಂದ ಆಚರಿಸುತ್ತಾರೆ. ಆಂಧ್ರದಲ್ಲಿ ಶ್ರೀರಾಮನು ರಾವಣನನ್ನು ಕೊಂದು ಸೀತೆಯನ್ನು ಅಯೋಧ್ಯೆಗೆ ಕರೆದು ತಂದ ದಿನವೆಂದು, ರಾವಣನ ಕೋಪ, ಸೇಡನ್ನು ತೀರಿಸಿ ಕೊಳ್ಳಲು ಮನೆ ಮುಂದೆ ಉರಿ ಹಾಕಿ ರಾವಣನ ಪ್ರತಿಕೃತಿ ಯನ್ನು ದಹನ ಮಾಡುವ ಶಾಸ್ತ್ರ ಮಾಡುತ್ತಾರೆ.

ಆಂಧ್ರದಲ್ಲಿ ಸಂಕ್ರಾಂತಿಯ ದಿನ ಕುಂಬಳಕಾಯಿ ರಂಗೋಲಿ ಯನ್ನು ಮನೆ ಮುಂದೆ ಹಾಕಿ ಮುಖ್ಯವಾಗಿ ಅದರ ಮೇಲೆ ಗೋವಿನ ಸಗಣಿಯಿಂದ ಮಾಡಿದ ಹಳದಿ ಬಣ್ಣದ ಸಣ್ಣ ಹೂವನ್ನಿಟ್ಟು ಅರಿಶಿನ ಕುಂಕುಮ ಹಚ್ಚಿ 'ಸೇವಂತಿಗೆ ಹೂವಿನಂತ ತಂಗಿಯನ್ನು, ಕೇದಿಗೆ ಹೂವಿನಂತ ಗಂಡ ನನ್ನು ಕೊಡು' ಎಂದೂ; 'ಗೃಹಿಣಿ ತನ್ನ ಗಂಡನಿಗೆ ಹೆಚ್ಚು ಆಯಸ್ಸು ಕೊಡು' ಎಂದು ಬೇಡುತ್ತಾರೆ.

ಹಬ್ಬಗಳೆಂದರೆ ಉಂಡು ಉಟ್ಟು ಉತ್ಸವ ಮಾಡಿಕೊಂಡು ನಲಿಯುವುದೆಂದಲ್ಲ. ಹಬ್ಬಗಳು ಮಾನವನ ದುಡಿಮೆಗೆ, ಅವನ ಕಷ್ಟ ಕಾರ್ಪಣ್ಯಗಳಿಗೆ ಒಂದಿಷ್ಟು ವಿದಾಯ ಕೊಟ್ಟು, ಅವರ ಮನಸ್ಸಿಗೆ ನೆಮ್ಮದಿ, ಶಾಂತಿ ಸಮಾಧಾನಗಳನ್ನು ನೀಡುತ್ತವೆ.

ಹಬ್ಬಗಳ ಮೂಲೋದ್ದೇಶವೇನೇ ಇರಲಿ. ಅವುಗಳ ಸಾಂಸ್ಕೃತಿಕ ಪ್ರಯೋಜನವನ್ನಾಗಲಿ, ಸಾಮಾಜಿಕ ಸಾರ್ಥಕತೆಯನ್ನಾಗಲಿ ಅಲ್ಲಗಳೆಯುವಂತಿಲ್ಲ. ಸಮಾಜದಲ್ಲಿ ಭಾವೈಕ್ಯತೆಯನ್ನು ಕುದುರಿಸಲು, ದುಡಿಮೆಯ ಶ್ರಮವನ್ನು, ಬಾಳಿನ ಬೇಸರವನ್ನು ಪರಿಹರಿಸಿ ಮನುಷ್ಯನ ಮನಸ್ಸಿಗೆ ಆನಂದವನ್ನುಂಟುಮಾಡುವ ಸಾಧನಗಳು.

ಒಟ್ಟಿನಲ್ಲಿ ಸಂಕ್ರಾಂತಿ ಒಂದು ಸಂಪ್ರದಾಯದ ಹಬ್ಬವಾಗಿರದೆ, ನಮ್ಮ ಸಂಸ್ಕೃತಿಯಲ್ಲಿ ಸ್ವರ್ಗ, ನರಕಗಳ ಸಂಬಂಧವನ್ನು ಕಲ್ಪಿಸುವ, ಪ್ರೀತಿ ವಿಶ್ವಾಸಗಳನ್ನು ಬೆಳೆಸುವ ಒಂದು ಪವಿತ್ರ ಕಲ್ಪನೆಯುಳ್ಳ ಹಬ್ಬವಾಗಿದೆ.



# ಶರಣು ಗುರುದೇವ ಶಿವಕುಮಾರ

ಧರ್ಮ ಹಿಮಾಲಯದ ಉತ್ತುಂಗ ಶಿಖರ
ಚೆಲ್ಲಿ ಹೊಂಗಿರಣ ಬೆಳಗುತಿಹ ಭಾಸ್ಕರ
ನೀಗಿ ತಮವನು ಸುಜ್ಞಾನ ಚೆಲ್ಲಿದ ಶ್ರೀಕರ
ಭಾರತ ಮಾತೆಯ ಬಿಜ್ಜೋತಿ ಶಿವಕುಮಾರ ॥

ಹಸಿದ ಒಡಲಿಗೆ ಅನ್ನವಿಟ್ಟ ಭೂಪ
ವಿದ್ಯೆಯ ಮತಿಮತಿಗು ಬೆಳಗಿದ ದೀಪ
ಮಂಗಳದ ಮನೆ ಕಟ್ಟಿದ ಶರಣಾಶಾರೂಪ
ನೀಗಿದ ದಿಸೆಗೆಟ್ಟ ಜನತೆಯ ಶಾಪ ॥

ಸಿದ್ಧಗಂಗೆಯ ಸಿದ್ಧಿಪುರುಷನಾದ ತಂದೆ
ಬಾಳ ಬೆಳಕು ಕರುಣಿಸೆ ನೀನಿತ್ತ ಬಂದೆ
ಅಣ್ಣ ಬಸವನ ಬೆಳಕು ಎತ್ತೆತ್ತ ಚೆಲ್ಲಿದೆ
ಕತ್ತಲಲಿ ತೊಳಲುವವರ ಕೈಯ್ಯ ಹಿಡಿದೆ ॥

ಕಾರುಣ್ಯ ಸಾಗರ ಸಿರಿನಾಡ ಭಾಸ್ಕರ
ಬಾಳ ಸಂಜೀವಿನಿ ಕರುನಾಡ ಬಂಗಾರ
ಉದ್ಧರಿಸು ದೀನರ ಸಿದ್ಧಗಂಗೆಯ ಧೀರ
ಕೋಟಿ ಶರಣು ಗುರುದೇವ ಶಿವಕುಮಾರ ॥

– ಕವಿತಾಕೃಷ್ಣ

> ಅಂಗಕ್ಕೆ ಆಚಾರವೆ ಚೆಲುವು, ಮನಕ್ಕೆ
> ಮಹಾನುಭಾವವೆ ಚೆಲುವು ಆತ್ಮಂಗೆ ಅರುಹೆ
> ಚೆಲುವು, ಅಖಿಂಡೇಶ್ವರನೆಂಬ ನಿಜವಿಂಬು
> ಗೊಂಡವಂಗೆ ಶರಣರ ಸಂಗವೇ ಚೆಲುವು.
>
> – ಷಣ್ಮುಖಸ್ವಾಮಿಗಳು

# 'ಲಜ್ಜೆ' ಒಂದು ಒಡವೆ

– ಪ. ರಾಮಕೃಷ್ಣ ಶಾಸ್ತ್ರಿ

ಭಗವಾನ್ ಬುದ್ಧನ ಬಳಿಗೆ ಶ್ರೀಮಂತಳಾದ ನವತರುಣಿಯೊಬ್ಬಳು ಬಂದಳು. ಅವಳ ದೇಹದಲ್ಲಿ ಬಂಗಾರದ ವಿಧವಿಧ ಆಭರಣಗಳು ಸುಶೋಭಿತವಾಗಿದ್ದವು. ಭಗವಂತನ ಮುಂದೆ ಮಂಡಿಯೂರಿ ಕುಳಿತು ಅವಳು, ''ಭಗವನ್, ಈ ಆಭರಣಗಳು ನನಗೆ ಒಪ್ಪುತ್ತಿವೆಯೇ?'' ಎಂದು ಕೇಳಿದಳು. ಬುದ್ಧನು ಮುಗುಳ್ನಕ್ಕು, ಅವನು ಹೇಳಿದ, ''ಇಲ್ಲ, ಈ ಆಭರಣಗಳೊಂದೂ ನಿನಗೆ ಒಪ್ಪುತ್ತದಿಲ್ಲ. ನಿನಗೊಪ್ಪುವ ನಿಜವಾದ ಆಭರಣ ಯಾವುದೆಂದು ತಿಳಿಯಬೇಕಿದ್ದರೆ ನೀನೀಗ ಧರಿಸಿದ ಆಭರಣಗಳನ್ನು, ಉಡುಪುಗಳನ್ನು ಕಳಚಿ ಕೆಳಗೆ ತೆಗೆದಿಡು''.

ತರುಣಿಯು ಎಲ್ಲವನ್ನೂ ಕಳಚಿ ತೆಗೆದಿಟ್ಟಳು. ಭಗವಂತ ಹೇಳಿದ, ''ಈಗ ತಗ್ಗಿಸಿದ ತಲೆಯನ್ನೊಮ್ಮೆ ಎತ್ತಿ ನನ್ನನ್ನು ನೋಡು'' ಅವನನ್ನು ನೋಡಲು ಅವಳಿಂದಾಗಲಿಲ್ಲ. ಇನ್ನಷ್ಟು ತಲೆ ತಗ್ಗಿಸಿದಳು. ''ಭಗವಂತ ಆ ಕೆಲಸ ನನ್ನಿಂದಾಗದು. ಲಜ್ಜಾಭಾರದಿಂದ ಕತ್ತು ತಗ್ಗಿ ಹೋಗಿದೆ'' ಎಂದಳು.

ಬುದ್ಧನು ಹೇಳಿದ ''ಹೆಣ್ಣೆ, ನಿನಗೊಪ್ಪುವ ನಿಜವಾದ ಆಭರಣ ವೆಂದರೆ ಬೆಳ್ಳಿಯಲ್ಲ, ಬಂಗಾರವಲ್ಲ, ಅದು ನಿನ್ನ ತಲೆ ಬಾಗಿಸಿದ ಈ ಲಜ್ಜೆ''.

ಲಜ್ಜಾ ಭಾರದಿಂದ ತಲೆಬಾಗಿ ನಡೆವ ಹೆಣ್ಣಿನ ಅಂದ-ಚೆಂದಗಳನ್ನು ಬಣ್ಣಿಸದ ಕವಿಗಳೇ ಇಲ್ಲ. ಶ್ರೀಕೃಷ್ಣ ಗೋಪಿಕಾ ವಸ್ತ್ರಾಪಹರಣದ ಪ್ರಸಂಗವೂ ಸ್ವಚ್ಛಂದತೆಯ ಮಿತಿಯನ್ನು ಮೀರಿದ ಪ್ರಾಯದ ಹೆಣ್ಣಿಗೆ ಬುದ್ಧ ಲಜ್ಜೆಯ ಅಗತ್ಯವನ್ನು ಬೋಧಿಸುವ ಒಂದು ಪಾಠ. ಸ್ತ್ರೀಗೆ ಸಮಾನ ಸ್ವಾತಂತ್ರ್ಯದ ಹಕ್ಕು ಪ್ರತಿಪಾದಿಸಲ್ಪಟ್ಟ ಈ ಕಾಲದಲ್ಲೂ ಅವಳಿಗೆ ಕಿತ್ತೊಗೆಯಲಾಗದ ಒಡವೆಯೆಂದರೆ ಲಜ್ಜೆ.

ಸ್ತ್ರೀಯ ಲಜ್ಜಾಭಾವಕ್ಕೆ ನಮ್ಮ ಸಂಸ್ಕೃತಿಯ ಚೌಕಟ್ಟು ಇದೆ. ಅವಳಲ್ಲಿ ಅದನ್ನು ಅಪೇಕ್ಷಿಸಿದ ಮಾತ್ರಕ್ಕೆ ಆಕೆ ಹೊಸಿಲು ತುಳಿದು ಹೊರ ಬರಬಾರದು, ಪರಕೀಯನೊಂದಿಗೆ ಮಾತನಾಡಬಾರದು ಎನ್ನುವ ನಿರ್ಬಂಧ ಅಲ್ಲವೇ ಅಲ್ಲ. ಹೆಣ್ಣಿನಲ್ಲಿ ಪುರುಷನಿಗೆ ಅಲಭ್ಯವಾದ ವಿಶಿಷ್ಟ ಗುಣಗಳ ಭಂಡಾರವನ್ನೇ ಪ್ರಕೃತಿ ಶೇಖರಿಸಿದೆ. ಪುರುಷನೂ ಹಸಿದವನಿಗೆ ಉಣಬಡಿಸಿ ಉಪಚರಿಸಬಲ್ಲ. ಆದರೆ ಬಳೆಗಳ ಕಿಂಕಿಣಿ ನಾದದೊಂದಿಗೆ ಮಾತ್ಸತ್ವದ ಧಾರಾಮೃತವನ್ನು ಬೆರೆಸಿ, ಬರೇ ನೀರನ್ನೂ ಅಮೃತೋಪಮವಾಗಿ ಬಡಿಸುವ ಮಾಧುರ್ಯ ಅವನದಲ್ಲ. ತಾಯಿ ಸತ್ತ ಮಗುವಿಗೆ ಆತ ಎಂದಿಗೂ ತಾಯಿಯಾಗಲಾರ. ಮಾತೆಯ ಮಮತೆಯ ಪ್ರತ್ಯೋದಕದ ಚಿಲುಮೆ. ಆತನ ಎದೆ ಕಡಲನ್ನು ಬಗೆದರೂ ಸಿಗದು. ಹಸಿದ ಹೊಟ್ಟೆಗೆ, ದುಡಿದು ದಣಿದ ಮೈಗೆ ನವೋತ್ಸಾಹದ ಪಾತಾಳಗಂಗೆಯ ಬಸಿರನ್ನೇ ಬಗೆದು ಹರಿಸಬಲ್ಲ ಅಗಾಧ ಸಾಮರ್ಥ್ಯ ಹೆಣ್ಣಿನ ಸಾಂತ್ವನದ ನುಡಿಗಳಲ್ಲಿವೆ.





# ಅಕ್ಕಮಹಾದೇವಿಯ ವಚನಗಳಲ್ಲಿ 'ಪರಿಸರ'ದ ಚಿತ್ರಣ

– ಬಿ.ಎಸ್. ಗಂಗನಳ್ಳಿ
ಸಂಶೋಧನಾ ವಿದ್ಯಾರ್ಥಿನಿ, ಕನ್ನಡ ಅಧ್ಯಯನ ಪೀಠ,
ಕ.ವಿ.ವಿ. ಧಾರವಾಡ-3

ಕನ್ನಡ ಸಾಹಿತ್ಯೇತಿಹಾಸದಲ್ಲಿ 12ನೆಯ ಶತಮಾನ ಒಂದು ಅಪೂರ್ವಯುಗ. ಅಂದು ನಡೆದ ಶರಣರ ಸಾಮಾಜಿಕ ಮತ್ತು ಧಾರ್ಮಿಕ ಚಳುವಳಿಯಿಂದಾಗಿ ಸಾಹಿತ್ಯಿಕವಾಗಿಯೂ ಹೊಸಮಾರ್ಗ ಕಾಣಿಸಿಕೊಂಡಿತು. ಪಂಪಾದಿಗಳ ಪ್ರೌಢವಾದ ಚಂಪೂಮಾರ್ಗವನ್ನು ತೊರೆದು ಆಡುನುಡಿಯ 'ವಚನ'ವೆಂಬ ಸಾಹಿತ್ಯ ಪ್ರಕಾರವನ್ನು ಶರಣ-ಶರಣೆಯರು ಆಯ್ದುಕೊಂಡರು. ಇದರಿಂದ ಒಟ್ಟು ಸಾಹಿತ್ಯದ ವಸ್ತು-ರೂಪ-ಭಾಷೆಗಳಲ್ಲಿ ಹೊಸತನ ಮೂಡಿಸಿ, ಅರಮನೆಯ ಅಟ್ಟವೇರಿದ ಸಾಹಿತ್ಯ ಶ್ರೀಯನ್ನು ಜನಸಾಮಾನ್ಯರ ಮಟ್ಟಕ್ಕೆ ನಿಲುಕಿಸುವ ಒಂದು ಪ್ರಯತ್ನ ಕೈಕೊಂಡರು. ಸಮಾಜದ ಏಳಿಗೆಗಾಗಿ ಹೊರಟ ಅವರು ಆತ್ಮೋದ್ಧಾರದೊಂದಿಗೆ, ಸಮಾಜೋದ್ಧಾರದ ಉದ್ದೇಶವನ್ನು ಮೂಲ ತಳಹದಿಯನ್ನಾಗಿರಿಸಿಕೊಂಡು ಜನಸಾಮಾನ್ಯರ ಮನಮುಟ್ಟುವಲ್ಲಿ ಸರಳವಾದ ಮಾತುಗಳನ್ನೇ ಸುಂದರ ಭಾಷೆಯನ್ನಾಗಿ ಹೊರಹೊಮ್ಮಿಸಿದರು. ಈ ದಿಸೆಯಲ್ಲಿ ಸುಮಾರು 40 ಜನ ವಚನಕಾರ್ತಿಯರು ವಚನ ರಚನೆಗೈದುದು ತಿಳಿದು ಬರುತ್ತದೆ. ಅಕ್ಕಮಹಾದೇವಿ, ಗಂಗಾಂಬಿಕೆ, ನೀಲಾಂಬಿಕೆ, ಮೋಳಿಗೆ ಮಹಾದೇವಿ, ಆಯ್ದಕ್ಕಿ ಲಕ್ಕಮ್ಮ ಅಮುಗೆ ರಾಯಮ್ಮ ಲಿಂಗಮ್ಮ ಸೂಳೆ ಸಂಕವ್ವೆ ಮುಂತಾದ ಶರಣೆಯರನ್ನು ಹೆಸರಿಸಬಹುದು.

ಕನ್ನಡದ ಪ್ರಪ್ರಥಮ ಕವಯಿತ್ರಿ ಎಂದರೆ ಅಕ್ಕಮಹಾದೇವಿ ಎಂದು ಹೇಳಲಾಗುತ್ತದೆ. ಸಂಖ್ಯಾ ದೃಷ್ಟಿಯಿಂದ ಹೆಚ್ಚಿನ ವಚನಗಳನ್ನು ರಚಿಸಿದ ಇವಳ ವಚನಗಳು ಗುಣದ ದೃಷ್ಟಿಯಿಂದಲೂ ಶ್ರೇಷ್ಠತೆಯನ್ನು ಪಡೆದಿವೆ. ಇವಳ ವಚನಗಳಲ್ಲಿ ಸಾಹಿತ್ಯದ ಸತ್ವವಿದೆ; ಆಧ್ಯಾತ್ಮಿಕ ತತ್ವವಿದೆ; ಸೃಷ್ಟಿಯ ಸಾಹಿತ್ಯವಿದೆ ಮತ್ತು ಜೀವನದ ಸಾರ್ಥಕತೆ ಇದೆ.

ಇವಳ ವಚನಗಳನ್ನು ಸತಿ-ಪತಿಭಾವದ ವಚನಗಳು ಬೆಡಗಿನ ವಚನಗಳು, ಭಾವಗೀತಾತ್ಮಕ ವಚನಗಳು ಹಾಗೂ ಪರಿಸರದ ಕುರಿತಾದ ವಚನಗಳು ಎಂದು ಮುಂತಾಗಿ ವಿಭಾಗಿಸಿಕೊಳ್ಳಬಹುದಾಗಿದೆ.

ಅಕ್ಕಮಹಾದೇವಿಯ ವಚನಗಳಲ್ಲಿ ಪರಿಸರದ ಚಿತ್ರಣ ಕಣ್ಮುಂದೆ ಕಟ್ಟುವಂತೆ ಚಿತ್ರಿತಗೊಂಡಿದೆ. ಇದಕ್ಕೆಲ್ಲಾ ಕಾರಣ ಅವಳು ಕಲ್ಯಾಣದಲ್ಲಿ ಕೆಲವು ದಿನಗಳನ್ನು ಕಳೆದಳು ಎಂದು ಹೇಳಬಹುದು. ಹೀಗಾಗಿ ಅವಳು ಕಂಡ ಪರಿಸರದ ಚೆಲುವು, ಸವಿದ ಒಲವು, ತಳೆದ ನಿಲುವು ಉನ್ನತವಾದದ್ದು. ಇಡೀ ಸೃಷ್ಟಿಯನ್ನೂ ದೈವತ್ವದ ದೃಷ್ಟಿಯಿಂದ ಕಂಡು ಅದಕ್ಕೆ ಕಾವ್ಯ ಸೌಂದರ್ಯದ ಮೆರುಗನ್ನು ಕೊಟ್ಟಳು.

ಅಕ್ಕಮಹಾದೇವಿಯಷ್ಟು ಪರಿಸರವನ್ನು ಕುರಿತು ಮತ್ತಾರೂ ತಮ್ಮ ವಚನಗಳಲ್ಲಿ ಪ್ರಸ್ತಾಪ ಮಾಡಿಲ್ಲವೆಂದು ಹೇಳಬಹುದು. ಚೆನ್ನಮಲ್ಲಿಕಾರ್ಜುನನಿಗಾಗಿ ಅವಳು ಅಲೆದದ್ದು ಬೆಟ್ಟ-ಗುಡ್ಡ, ನದಿ-ಪರ್ವತ, ಪಶು-ಪಕ್ಷಿ, ಸುಂದರ ವನಗಳ ಮಧ್ಯದಲ್ಲಿ. ಮಲೆನಾಡ ಪರಿಸರದಲ್ಲಿ ಬೆಳೆದ ಅವಳು ಸೃಷ್ಟಿಯ ಅನಂತತೆಯನ್ನು, ವಿಚಿತ್ರತೆಯನ್ನು ಹಾಗೂ ಅದರ ಭಯಂಕರತೆಯನ್ನು ಕಂಡವಳು.

> **ಅಕ್ಕಮಹಾದೇವಿಯ ವಚನಗಳಲ್ಲಿ ಪರಿಸರದ ಚಿತ್ರಣ ಕಣ್ಮುಂದೆ ಕಟ್ಟುವಂತೆ ಚಿತ್ರಿತಗೊಂಡಿದೆ. ಅವಳು ಕಂಡ ಪರಿಸರದ ಚೆಲುವು, ಸವಿದ ಒಲವು, ತಳೆದ ನಿಲುವು ಉನ್ನತವಾದದ್ದು, ಇಡೀ ಸೃಷ್ಟಿಯನ್ನೂ ದೈವತ್ವದ ದೃಷ್ಟಿಯಿಂದ ಕಂಡು ಅದಕ್ಕೆ ಕಾವ್ಯ ಸೌಂದರ್ಯದ ಮೆರುಗನ್ನು ಕೊಟ್ಟಳು. ಪರಿಸರದ ನಾನಾ ಮುಖಗಳನ್ನು ಕಂಡು, ನಾನಾ ಪ್ರದೇಶಗಳ ಚೆಲುವನ್ನು ವರ್ಣಿಸಿದ ರೀತಿ ಅವಳ ಸ್ವಅನುಭವದ ಪ್ರತಿರೂಪವಾಗಿದೆ. ಕನ್ನಡ ಸಾಹಿತ್ಯದಲ್ಲಿ ಇವಳನ್ನು ಪ್ರಕೃತಿ ಕವಯಿತ್ರಿ, ಪರಿಸರ ಕವಯಿತ್ರಿ ಎಂದು ಕರೆಯುವಷ್ಟರ ಮಟ್ಟಿಗೆ ಇವಳ ವಚನಗಳಲ್ಲಿ ಪರಿಸರದ ಪರಿಪೂರ್ಣತೆ ಮೂಡಿ ನಿಂತಿದೆ.**

ಚೆನ್ನಮಲ್ಲಿಕಾರ್ಜುನನ ಇರವನ್ನು ಕುರಿತು ಹೇಳುವಲ್ಲಿ ಅವಳ ಅಭಿವ್ಯಕ್ತಿ ಕೆಳಗಿನ ವಚನದಲ್ಲಿ ಈ ರೀತಿ ಮೂಡಿ ನಿಂತಿದೆ ;

**ನೆಲದ ಮರೆಯ ನಿಧಾನದಂತೆ
ತಿಲದ ಮರೆಯ ತೈಲದಂತೆ
ಶಿಲೆಯ ಮರೆಯ ಕನಕದಂತೆ
ಮರದ ಮರೆಯ ತೇಜದಂತೆ
ಭಾವದ ಮರೆಯ ಬ್ರಹ್ಮವಾಗಿಪ್ಪ
ಚೆನ್ನಮಲ್ಲಿಕಾರ್ಜುನನ ನಿಲವನರಿಯಬಾರದು.**

ಜೀವಾತ್ಮನಲ್ಲಿ ಪರಮಾತ್ಮ ಇದ್ದೇ ಇರುವನು. ಆದರೆ ಅವನ ಕಣ್ಣಿಗೆ ಕಾಣುವುದಿಲ್ಲ. ನೆಲದಲ್ಲಿರುವ ನಿಧಿ. ಎಳ್ಳಿನಲ್ಲಿರುವ ಎಣ್ಣೆ ಶಿಲೆಯಲ್ಲಿರುವ ಸುವರ್ಣ, ಮರದಲ್ಲಿರುವ ಅಗ್ನಿ ಯಾವ ರೀತಿ ಕಣ್ಣಿಗೆ ಕಾಣುವುದಿಲ್ಲವೋ, ಅದೇ ರೀತಿ ದೇವರ ಇರುವು ಎಂದು ಹೇಳುವಲ್ಲಿ ಪ್ರಕೃತಿಯ ಪ್ರತಿಯೊಂದು ವಸ್ತುವಿನಲ್ಲಿ ಒಂದೊಂದು ಅಮೂಲ್ಯ ವಸ್ತು ಅಡಗಿರುವುದನ್ನು ಹೇಳಿದ್ದಾಳೆ. ಇನ್ನೊಂದು ವಚನದಲ್ಲಿ ;

**ಜಲದ ಮಂಟಪದ ಮೇಲೆ ಉರಿಯ ಚಪ್ಪರವಿಕ್ಕಿ
ಆಲಿಕಲ್ಲ ಹಸೆಯ ಹಾಸಿ ಬಾಸಿಗವ ಕಟ್ಟಿ
ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು
ಎಂದೆಂದಿಗೂ ಬಿಡದ ಬಾಳುವೆಗೆ ಕೊಟ್ಟರೆನ್ನ
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ
ಮದುವೆಯ ಮಾಡಿದರಲೆಯವ್ವಗಳಿರಾ**

ಎನ್ನುವ ಈ ಬೆಡಗಿನ ವಚನದಲ್ಲಿ ಜಲದ ಮಂಟಪ, ಉರಿಯ ಚಪ್ಪರ, ಆಲಿಕಲ್ಲ ಹಸೆ ಎಂದು ಹೇಳುವಲ್ಲಿ ಪರಿಸರದಲ್ಲಿರುವ ಜಲ,

ಉರಿ, ಆಲಿಕಲ್ಲು ಮುಂತಾದ ವಸ್ತುಗಳನ್ನು ಬಳಸಿಕೊಂಡು ನುಡಿಗೆ ಬೆಡಗನ್ನು ತಂದಿದ್ದಾಳೆ.

ಪ್ರಕೃತಿಯಲ್ಲಿ ಕಂಡ ಪ್ರತಿಯೊಂದು ವಸ್ತುವನ್ನು ಪ್ರತಿಮೆ, ಸಂಕೇತ, ಉಪಮೆ, ದೃಷ್ಟಾಂತಗಳನ್ನಾಗಿ ಅಕ್ಕಮಹಾದೇವಿ ಬಳಸಿಕೊಂಡಿದ್ದರಿಂದ ಅವಳ ವಚನಗಳಿಗೆ ಒಂದು ರೀತಿಯ ಶಕ್ತಿ, ಒಲವು ಬಂದಿದೆ.

**'ಎರದ ಮುಳ್ಳಿನಂತೆ ಪರಗಂಡರೆನಗವ್ವ'** ಎಂದು ಹೇಳುವಲ್ಲಿ 'ಎರದ ಮುಳ್ಳು' ಕೂಡಾ ಅಭಿವ್ಯಕ್ತಿ ಪಡೆದಿದೆ. ಸುಂದರವಾದ ಉಪಮೆಯಲ್ಲದಿದ್ದರೂ ವ್ಯಂಗ್ಯವನ್ನು, ಜಿಗುಪ್ಸೆಯನ್ನು ಹೇಳುವಲ್ಲಿ ಸಮಂಜಸವಾಗಿ ಮೂಡಿ ಬಂದಿದೆ.

ಹಾಗೆಯೇ ;

**ಕಲ್ಲತಾಗಿದ ಮಿಟ್ಟೆ ಕೆಲಕ್ಕೆ ಸಾರುವಂತೆ**
**ಆನು ಬಲ್ಲೆನೆಂಬ ನುಡಿ ಸಲ್ಲದು**
**ಲಿಂಗದಲ್ಲಿ ಅರಿದು ಮೆಚ್ಚಿದ ಮನ ಹೊರಗೆ ಬೀಸರವೋಗದೆ?**
**ಉರಿತಾಗಿದ ಕೋಲು ಗಣಿ ತೋರಿದಂತೆ**
**ಮಣಿದು ಬೀಸುವ ಗಾಳಿ ಪರಿಮಳವನುಂಡಂತೆ**
**ಎನ್ನನಿರಿಸಯ್ಯಾ ಚೆನ್ನಮಲ್ಲಿಕಾರ್ಜುನಾ**

''ಕಲ್ಲ ತಾಗಿಹ ಮಣ್ಣಿನರಾಶಿ ಕೆಲಕ್ಕೆ ಸಾರುವಂತೆ'', ''ಉರಿ ತಾಗಿದ ಬೀಸುವ ಗಾಳಿ ಪರಿಮವಳನುಂಡಂತೆ' ಮುಂತಾದ ಸೃಷ್ಟಿಯ ಕ್ರಿಯೆಗಳನ್ನು ಹೇಳುವಲ್ಲಿ ಪರಿಸರದ ಬಗೆಗಿರುವ ಅವಳ ಸೂಕ್ಷ್ಮ ಅವಲೋಕನ ದೃಷ್ಟಿ ವ್ಯಕ್ತವಾಗುತ್ತದೆ. ಅಲ್ಲದೆ ಇನ್ನೊಂದು ಕಡೆ ;

**ಮರ ಮರ ಮಥನಿಸಿ ಕಿಚ್ಚು ಹುಟ್ಟಿ**
**ಸುತ್ತಣ ತರುಮರಾದಿಗಳು ಸುಡಲಾಯಿತ್ತು**
**ಆತ್ಮ ಮಥನಿಸಿ ಅನುಭಾವ ಹುಟ್ಟಿ**
**ಹೊದ್ದಿದ ತನುಗುಣಾದಿಗಳ ಅನುಭಾವವ ತೋರಿ**
**ಎನ್ನ ಒಡಲನುಳುಹಿಕೊಳ್ಳಾ ಚೆನ್ನಮಲ್ಲಿಕಾರ್ಜುನಾ**

ಎಂಬ ಈ ವಚನದಲ್ಲಿ ಮರ-ಮರ ಹೊಸೆದು ಕಿಚ್ಚು ಹುಟ್ಟುತ್ತದೆ. ಆ ಕಿಚ್ಚು ಸುತ್ತಲಿನ ಗಿಡ-ಮರಗಳನ್ನು ಸುಡುವುದು. ಹಾಗೆಯೇ ಜೀವಾತ್ಮ-ಪರಮಾತ್ಮ ಎಂಬೆರಡು ವಸ್ತುಗಳು ಮಥನಿಸಿ ಅನುಭಾವ ಹುಟ್ಟುವುದು. ಇದು ತನುಗುಣಾದಿಗಳನ್ನು ನಾಶಪಡಿಸುವುದು ಎಂದು ಸುಂದರವಾದ ದೃಷ್ಟಾಂತದಲ್ಲಿ ಹೇಳಿದ್ದಾಳೆ.

ಹಾಗೆಯೇ-

**ವಟವೃಕ್ಷದೊಳಡಗಿದ ಸಮರಸ ಬೀಜ ಭಿನ್ನಭಾವಕ್ಕೊ ಬಪ್ಪುದೇ**
**ಕಂಗಳ ನೋಟ ಕರಿವಿಟ್ಟ ಮನದ ಸೊಗಸು**
**ಅನಂಗನ ಧಾಳಿಯ ಗೆಲಿದವು ಕಾಣಾ**
**ಈ ಮರೀಚಿಕಾ ಜಲದೊಳಡಗಿದ ಪ್ರಾಣಿ**
**ವ್ಯಾಧನ ಬಲೆಗೆ ಸಿಲುಕುವುದೇ?**
**ನಿನ್ನ ವಶಕ್ಕೆ ಸಿಕ್ಕಿ ಹಳೆಂಬುದ ಮರೆಯಾ ಮರುಳೇ**
**ಚೆನ್ನಮಲ್ಲಿಕಾರ್ಜುನನಲ್ಲದೆ ಪರಪುರುಷ ನಮಗಾಗದ ಮೋರೆ ನೋಡಾ.**

ಇಲ್ಲಿ ಬಳಕೆಗೊಂಡ ವಟವೃಕ್ಷ (ಆಲದ ಮರ) ಸಮರಸ ಬೀಜ. ಮರೀಚಿಕಾ ಜಲದೊಳಗಿಡ ಪ್ರಾಣಿ, ವ್ಯಾಧನ ಬಲೆಗೆ ಸಿಲುಕುಹುದೇ? ಮುಂತಾದ ಪರಿಸರದ ಪ್ರಕ್ರಿಯೆಗಳನ್ನು ಪರಿಚಯಿಸಿಕೊಟ್ಟಿದ್ದಾಳೆ.

**''ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು**
**ಕೊಳನಲ್ಲದೆ ಕಿರುವಳ್ಳಕ್ಕೇಳಸುವುದೇ ಹಂಸೆ?''**

ಎನ್ನುವಲ್ಲಿ ಗಿರಿ-ಹುಲ್ಲು ಮೊರಡಿ, ಕೊಳ-ಕಿರುವಳ್ಳ ಮುಂತಾದ ಸೃಷ್ಟಿಯ ವಿಪರ್ಯಾಸತೆಯನ್ನು ಕುರಿತು ಹೇಳಿದ್ದಾಳೆ.

**''ಚಂದನವ ಕಡಿದು ಕೋರೆದಡೆ ತೇದಡೆ**
**ನೊಂದೆನೆಂದು ತನ್ನ ಕಂಪ ಬಿಡುವುದೆ ಅಯ್ಯ?**
**ಸಂದು ಸಂದು ಕಡಿದು ಕತ್ತರಿಸಿ ಗಾಣದಲ್ಲಿ ಹಿಂಡಿದಡೆ**
**ಬೆಂದು ಪಾಕಗುಡದೆ ಸಕ್ಕರೆಯಾಗಿ ನೊಂದೆನೆಂದು**
**ಸಿಹಿ ಮಾಬುದೇ ಕಬ್ಬು?**

ಪರಿಸರದಲ್ಲಿರುವ ಪ್ರತಿಯೊಂದು ವಸ್ತು ತನ್ನಲ್ಲಿರುವ ಶ್ರೇಷ್ಠತೆಯನ್ನು ನಿಸ್ವಾರ್ಥತೆಯಿಂದ ಮಾನವನಿಗೆ ನೀಡುವ ಸೃಷ್ಟಿಯ ವೈಶಾಲ್ಯತೆಯನ್ನು ಕುರಿತು ವಿವರಣೆ ನೀಡಿದ್ದಾಳೆ. ಇನ್ನೊಂದು ವಚನದಲ್ಲಿ ;

**''ಬೆಟ್ಟದ ಮೇಲೊಂದು ಮನೆಯ ಮಾಡಿ**
**ಮೃಗಗಳಿಗೆ ಅಂಜಿದೊಡೆಂತಯ್ಯ,**
**ಸಮುದ್ರದ ತಡೆಯಲೊಂದು ಮನೆಯ ಮಾಡಿ**
**ನೆರೆ-ತೊರೆಗಳಿಗಂಜಿದೊಡೆಂತಯ್ಯ''**

ಎಂದು ಹೇಳುವಲ್ಲಿ ಪರಿಸರದ ಸುಂದರವಾದ ದೃಷ್ಟಾಂತವನ್ನೇ ಹೆಣೆದಿದ್ದಾಳೆ.

**ಅಳಲುಗೊಂಡ ಕೆರೆಗೆ ತೊರೆ ಬಂದು ಹಾಯಿದಂತೆ**
**ಬಳಲುಗೊಂಡ ಸಸಿಗೆ ಮಳೆ ಸುರಿಸಿದಂತಾಯಿತು ನೋಡಾ ಇಂದೆನಗೆ**
**ಇಹದ ಸುಖ ಪರದ ಗತಿಯೆಂದೆನಿಸಿದ ಗುರುವೆ**
**ಚೆನ್ನಮಲ್ಲಿಕಾರ್ಜುನನ ತಂದು ಎನ್ನ ವಶಕ್ಕೆ ಕೊಟ್ಟ ಗುರುವೆ**

ಇಲ್ಲಿ ಅಳಲುಗೊಂಡ ಕೆರೆ, ಬರಲುಗೊಂಡ ಗಿಡಗಳೂ ಕೂಡ ಮಹತ್ವವನ್ನು ಪಡೆದಿವೆ. ಪಶು-ಪಕ್ಷಿಗಳಿಗೆ ಸಂಬೋಧಿಸಿ ಹೇಳುವಲ್ಲಿ ;

**ವನವೆಲ್ಲಾ ನೀನೆ ವನದೊಳಗಣ ದೇವತರುವೆಲ್ಲಾ ನೀನೆ**
**ತರುವಿನೊಳಗಾಡುವ ಖಗಮೃಗಳೆಲ್ಲಾ ನೀನೆ**
**ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ನೀ ಎನಗೇಕೆ ಮುದೋರೆ**

**''ಚಿಲಿಮಿಲಿಯೆಂದು ಓದುವ ಗಿಳಿಗಳಿರಾ ನೀವು ಕಾಣಿರೆ**
**ಸರವೆತ್ತಿ ಹಾಡುವ ಕೋಗಿಲೆಗಳಿರಾ ನೀವು ಕಾಣಿರೆ**
**ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ**
**ಗಿರಿ-ಗಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ**
**ಚೆನ್ನಮಲ್ಲಿಕಾರ್ಜುನನೆಲ್ಲಿಹನೆಂದು ಹೇಳಿರೆ.**

ಚೆನ್ನಮಲ್ಲಿಕಾರ್ಜುನನನ್ನು ಅರಸುತ್ತಾ ಹೊರಟಾಗ ಪ್ರಕೃತಿಯ ಮಡಿಲಲ್ಲಿ ಸ್ವಚ್ಛಂದವಾಗಿ ಬದುಕುವ ಅಳಿಸಂಕುಳ, ಕೋಗಿಲೆ, ಗಿಳಿ, ಖಗಮೃಗಗಳು ಮುಂತಾದ ಪಶು-ಪಕ್ಷಿಗಳನ್ನು ಮೊರೆ ಹೋಗುವುದನ್ನು ನೋಡಿದರೆ ಅಕ್ಕಮಹಾದೇವಿ ಪ್ರಕೃತಿಯನ್ನು ಎಷ್ಟೊಂದು ಅಪ್ಪಿಕೊಂಡಿದ್ದಳೆಂದು ತಿಳಿಯುತ್ತದೆ.





ಕೊನೆಗೆ ಕದಳಿವನಕ್ಕೆ ಬಂದು --

**ಕದಳಿ ಎಂಬುದು ತನು ಕದಳಿ ಎಂಬುದ ಮನ**
**ಕದಳಿ ಎಂಬುದು ವಿಷಯ ಸಂಕುಳ**
**ಕದಳಿ ಎಂಬುದ ಭವಘೋರಾರಣ್ಯ**
**ಕದಳಿ ಎಂಬುದ ಗೆದ್ದು ತವೆ ಬದುಕಿ ಬಂದು**
**ಕದಳಿಯ ಬನದಲ್ಲಿ ಭವಹರನ ಕಂಡೆನು**
**ಭವಗೆಟ್ಟು ಬಂದ ಮಗಳೆಂದು ಕರುಣದಿಂದ ತೆಗೆದಪ್ಪಿ ಬಿಗಿದೊಲಿದಪ್ಪಿದರೆ**
**ಚೆನ್ನಮಲ್ಲಿಕಾಜುನ ಹೃದಯಕಮಲದಲ್ಲಿ ಅಡಗಿದೆನು**

ಹೀಗೆ ಅವಳ ವಚನಗಳಲ್ಲಿ ಪ್ರಕೃತಿ ಸೌಂದರ್ಯ, ಚೆಲ್ಲುವರಿದ ಬೆಳದಿಂಗಳಂತಿದೆ. ಈ ಪ್ರಕೃತಿ ಸೌಂದರ್ಯವನ್ನು ಕುರಿತು ಹೇಳುವ ಅವಳ ವಚನಗಳು ಅವಳ ವರ್ಣನಾ ಚಾತುರ್ಯವನ್ನು ಎತ್ತಿ ತೋರುತ್ತವೆ.

ಪರಿಸರದೊಂದಿಗೆ ಬೆರೆತು ಪಶು-ಪಕ್ಷಿಗಳೊಡನೆ ತಾನೂ ಒಬ್ಬಳಾಗಿ ನದಿ ಪರ್ವತಗಳನ್ನು ಕಂಡು ಹರ್ಷ ಪುಳಕಿತಳಾಗಿ, ಗಿರಿ-ಗಹ್ವರಗಳ ಭವ್ಯತೆ ಭಯಂಕರತೆಯನ್ನು ವಚನಗಳಲ್ಲಿ ಒಡಮೂಡಿಸಿದ್ದಾಳೆ.

ನೀರು, ನೆಲ, ಗಾಳಿ, ಅಗ್ನಿ, ಕಲ್ಲು, ಮಣ್ಣು, ಇಂದ್ರ, ನೀಲ ಪರ್ವತ, ಚಂದ್ರಕಾಂತ ಶಿಲೆ, ಸಮುದ್ರ, ಸರೋವರ, ತೊರೆ, ಕಿರುವಳ್ಳ, ಮುಂತಾದವುಗಳಲ್ಲದೆ, ಗಿಳಿ, ಕೋಗಿಲೆ, ಮರಿದುಂಬಿ, ನವಿಲು,ಎರಳೆ, ಕುಂಜರ ಮುಂತಾದ ಪಶು-ಪಕ್ಷಿಗಳು. ತರು-ಲತೆ, ಮಾಮರಗಳು, ಈಳೆ, ನಿಂಬೆ, ಮಾವು, ಕಬ್ಬು, ಬಾಳೆ, ಹಲಸು ಇತ್ಯಾದಿ ಫಲಗಳು, ಮರುಗ, ಮಲ್ಲಿಗೆ, ಪಚ್ಚೆ, ಮುಡಿವಾಳಗಳಂತೆ ಹಲವಾರು ಪುಷ್ಪಗಳ ಹೆಸರುಗಳು ಇತ್ಯಾದಿಯಾಗಿ ಪ್ರಕೃತಿಯಲ್ಲಿಯ ಸುಂದರವಾದ ವಸ್ತುವನ್ನದೆ, ಬರಲುಗಿಡ, ಅರಲುಗೊಂಡ ತೊರೆ, ಹುಲ್ಲು ಮೊರಡಿ, ಎರದುಮುಳ್ಳು ಮುಂತಾದವುಗಳು ವಚನಗಳಲ್ಲಿ ಸ್ಥಾನ ಪಡೆದಿವೆ.

ಪರಿಸರದ ನಾನಾ ಮುಖಗಳನ್ನು ಕಂಡು, ನಾನಾ ಪ್ರದೇಶಗಳ ಚೆಲುವನ್ನು ವರ್ಣಿಸಿದ ರೀತಿ ಅದು ಅವಳ ಸ್ವಅನುಭವದ ಪ್ರತಿರೂಪವಾಗಿದೆ. ಕನ್ನಡ ಸಾಹಿತ್ಯದಲ್ಲಿ ಇವಳನ್ನು ಪ್ರಕೃತಿ ಕವಯಿತ್ರಿ, ಪರಿಸರ ಕವಯಿತ್ರಿ ಎಂದು ಕರೆಯುವಷ್ಟರ ಮಟ್ಟಿಗೆ ಇವಳ ವಚನಗಳಲ್ಲಿ ಪರಿಸರದ ಪರಿಪೂರ್ಣತೆ ಮೂಡಿ ನಿಂತಿದೆ.

## ಸಂಸಾರದ ಸಾಧನೆ

''.....ಸಂಸಾರ ಮಾಡಬೇಕು. ಬಸವಣ್ಣನವರು ಹೇಳುವಂತೆ ಸಂಸಾರವನ್ನು ಸವೆಯ ಬಳಸಬೇಕು. ಯಾವ ಸುಖ ಭೋಗ ಭಾಗ್ಯ ವಿಲಾಸವೂ ಬಳಕೆಗೆ ಹೊರತಾಗಬಾರದು. ಸಂಸಾರಸುಖದ ಯಾವುದೇ ವಾಸನೆಯನ್ನಿಟ್ಟುಕೊಂಡು ಸತ್ತು ಹೋಗಬಾರದು. ಹಾಗಾದರೆ ಲಿಂಗದ ಹಾದಿಯನ್ನು ಬಿಟ್ಟು, ಕಂಡ ಜ್ಞಾನ, ಕೂಡಿದ ಯೋಗ, ಪೂಜಿಸುವ ಭಕ್ತಿಯನ್ನು ಒಳಗೆ ನಡೆಸಿಕೊಂಡು, ಹೊರಗೆ ಸಂಸಾರವನ್ನು ಬಳಸಿಕೊಂಡು ಹೋಗಬೇಕೆ? ಹೊರಗೊಂದು ಇರುವುದು ಸತ್ಯದ ಹಾದಿಯಲ್ಲ, ಸತ್ಯಶರಣರ ನಿಜಪಥವಲ್ಲ. ಲೋಕಸಂಸಾರವನ್ನು ಪರಮಾರ್ಥದ ಮಾರ್ಗದಲ್ಲಿಯೆ ಇರಿಸಿಕೊಂಡು, ಅನುಕೂಲಿಸಿಕೊಂಡು, ಬಲಿಸಿಕೊಂಡು, ಬೆಳೆಸಿಕೊಂಡು ಹೋಗುವುದು ಸಾಧ್ಯವಿದೆಯೇ?.. ಎಂದು ಕೇಳಿದರೆ, ಸಂಸಾರವನ್ನು ಸಾಧಿಸದೆ ಹೋದರೆ, ಈ ಲೋಕವನ್ನು ಇಲ್ಲಿಯೆ ಬಿಟ್ಟು ಮೇಲು ಲೋಕಕ್ಕೆ ಹೋದರೆ, ಜ್ಞಾನ ಯೋಗ ಭಕ್ತಿ ಪೂಜೆಗಳ ಕ್ರಮವೇಕೆ, ಸಾಧನೆಯೇಕೆ ಎಂದು ಉತ್ತರ ಕೊಡುತ್ತಾರೆ ಶರಣರು. ಇಲ್ಲಿ ಬಳಸಲಿಕ್ಕೆ ಬಾರದ ಜ್ಞಾನ ಪೂಜೆಗಳನ್ನು ಏಕೆ ಮಾಡಬೇಕು? ಇಲ್ಲಿ ಸಲ್ಲಬೇಕು, ಅಂದರೆ ಅಲ್ಲಿ ಸಲ್ಲುತ್ತಾನೆ ಮಾನವಪ್ರಾಣಿ. 'ಇಲ್ಲಿ ಸಲ್ಲದವರು' ಅಲ್ಲಿಯೂ ಸಲ್ಲುವುದಿಲ್ಲ. ಅಲ್ಲಿಯನ್ನು ಇಲ್ಲಿಗೆ ತಂದು, ಇಲ್ಲಿಯನ್ನು ಅಲ್ಲಿಗೆ ಅರ್ಪಿಸಿ, 'ಇಹ ಪರ'ವೆಂಬುದನ್ನು ನಿಶ್ಶೇಷವಾಗಿ ತೊಡೆದು, ಎಲ್ಲವನ್ನೂ ಪ್ರಸನ್ನ ಭಕ್ತಿಯಾಗಿ ಪರಿವರ್ತಿಸುತ್ತಿರುವ ಲಿಂಗಭಕ್ತರ ರೀತಿಯನ್ನು ಸಾವಧಾನವಾಗಿ ಪರಿಶೀಲಿಸಿ ನೋಡಿ. ಇದೋ ಇಲ್ಲಿ, ಸರ್ವಾಂಗದಲ್ಲಿ ಲಿಂಗವನ್ನು ಧರಿಸಿಕೊಂಡು, ಸರ್ವಾಂಗಲಿಂಗದ ಬೆಳಗಿನಲ್ಲಿ ಎಚ್ಚತ್ತು, ಲಿಂಗಪೂಜೆ, ಲಿಂಗಭಕ್ತಿಯಲ್ಲಿ ನಿರತನಾಗಿರುವ ಲಿಂಗವಂತನ ಮನೆಗೆ ಬನ್ನಿ. ಈಗಾಗಲೆ ಈತನ ಪರಿಚಯ ನಮಗಿದೆ. ಆದರೂ ಆತನ ಮನೆಯೊಳಗೆ ಹೊಲದೊಳಗೆ, ಆತನ ವ್ಯಾಪಾರ ಉದ್ಯೋಗದೊಳಗೆ, ಆತನ ತನು ಮನ ಧನ ಅರ್ಥ ಪ್ರಾಣ ಅಭಿಮಾನದೊಳಗೆ, ಆತನ ಹೊನ್ನು ಹೆಣ್ಣು ಮಣ್ಣಿನೊಳಗೆ,ಆತನ ಸಕಲ ಸಂಸಾರದೊಳಗೆ, ಆತನೊಳಗೆ ಸಾವಧಾನ ಸದ್‌ಭಕ್ತಿಯಿಂದ ಪ್ರವೇಶಮಾಡಿ ನೋಡಿ. ಆತ ಸಂಸಾರ ಹೇಗೆ ನಡೆಸಿದ್ದಾನೆ?"

-ಸಂ.ಶಿ. ಭೂಸನೂರಮಠ

(''ವಚನ ಸಾಹಿತ್ಯ ಸಂಗ್ರಹ''ದ ಪ್ರಸ್ತಾವನೆಯಿಂದ)

# ಶಿಕ್ಷಣದಲ್ಲಿ ಪಂಚೇಂದ್ರಿಯಗಳ ಮಹತ್ವ

-- ಎಸ್. ಶಿವಕುಮಾರ್,
ಅಧೀಕ್ಷಕರು, ಶ್ರೀ ಬಸವೇಶ್ವರ ಶಿಕ್ಷಕರ ತರಬೇತಿ ಸಂಸ್ಥೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.

ಪಂಚೇಂದ್ರಿಯಗಳು ಜ್ಞಾನಗಳಿಕೆಯ ಹೆಬ್ಬಾಗಿಲುಗಳು ಎಂದು ಶಿಕ್ಷಣ ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಜ್ಞಾನೇಂದ್ರಿಯಗಳು ಮಾನಸಿಕ ಬೆಳವಣಿಗೆ, ಆಲೋಚನೆ, ವಿವೇಚನೆ, ಕಲ್ಪನೆ ಮೂಡಿಸುವ ಕ್ರಿಯೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಪಂಚೇಂದ್ರಿಯಗಳಲ್ಲಿ ನೇತ್ರ ಇಂದ್ರಿಯ ಹೆಚ್ಚಿನ ಮಹತ್ವ ವಹಿಸುವುದು. ವಸ್ತುಗಳನ್ನು ನೋಡುವುದು, ವೀಕ್ಷಿಸುವುದು, ಮಾಹಿತಿಗಳನ್ನು ತಿಳಿಯುವುದು, ಇತ್ಯಾದಿ ಕ್ರಿಯೆಗಳೆಲ್ಲವೂ ನಡೆಯುವುದು ಈ ಇಂದ್ರಿಯದ ಮೂಲಕವೇ.

**ಪಂಚೇಂದ್ರಿಯಗಳು ಜ್ಞಾನಗಳಿಕೆಯ ಹೆಬ್ಬಾಗಿಲುಗಳು ಎಂದು ಶಿಕ್ಷಣ ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಜ್ಞಾನೇಂದ್ರಿಯಗಳು ಮಾನಸಿಕ ಬೆಳವಣಿಗೆ, ಆಲೋಚನೆ, ವಿವೇಚನೆ, ಕಲ್ಪನೆ ಮೂಡಿಸುವ ಕ್ರಿಯೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಶಿಕ್ಷಣ, ಕಲಿಕೆ, ಆಲೋಚನೆ, ಇತ್ಯಾದಿ ಕ್ರಿಯೆಗಳಿಗೆ ಮೆದುಳು ಸಹ ಸೂಕ್ತ ರೀತಿಯಲ್ಲಿ ಪ್ರಕ್ರಿಯಿಸಿ, ಸಮರ್ಪಕ ನಿರ್ಧಾರ ಕೈಗೊಳ್ಳಲು ನೆರವಾಗುವ ಅಂಶವನ್ನು ಲೇಖಕರು ಪ್ರಸಕ್ತ ಲೇಖನದಲ್ಲಿ ವಿಚಾರ ಮಾಡಿದ್ದಾರೆ.**

ದೃಶ್ಯ ಮಾಧ್ಯಮದಿಂದ ಶೇ. 83ರಷ್ಟು ಕಲಿಕೆ ಲಭಿಸುವುದೆಂದು ಸಂಶೋಧನೆಗಳಿಂದ ವ್ಯಕ್ತವಾಗಿದೆ. ಶಿಕ್ಷಣ ತಜ್ಞರು, ಮನಃಶಾಸ್ತ್ರಜ್ಞರು ಈ ಅಂಶವನ್ನು ಮನಗಂಡು ಇಂದ್ರಿಯಗಳ ತರಬೇತಿಯ ಬಗ್ಗೆ ತತ್ವ ನಿರೂಪಿಸಿ, ಇಂದ್ರಿಯ ತರಬೇತಿಯನ್ನು ಶಿಕ್ಷಣ ಪ್ರಕ್ರಿಯೆಗೆ ಒಳಪಡಿಸಿದ್ದಾರೆ. ಮೇರಿಯಾ-ಮಾಂಟಿಸೋರಿ ತನ್ನ ಶೈಕ್ಷಣಿಕ ಸಿದ್ಧಾಂತ ಮತ್ತು ಪ್ರಾಯೋಗಿಕ ಶಿಕ್ಷಣ ವಿಧಾನಗಳಲ್ಲಿ ಇಂದ್ರಿಯ ತರಬೇತಿಯಿಂದ ಮಕ್ಕಳ ಶಿಕ್ಷಣವನ್ನು ಪ್ರಾರಂಭಿಸಿ ಯಶಸ್ವಿಯಾಗಿದ್ದಾರೆ. ಇಂದ್ರಿಯ ತರಬೇತಿಗಾಗಿ ವಿವಿಧ ಚಟುವಟಿಕೆಗಳನ್ನು, ಹಾಗೂ ಅದಕ್ಕೆ ಅಗತ್ಯವಾದ ಆಟಿಕೆಗಳನ್ನು ನಿಯೋಜಿಸಬೇಕೆಂದು ಒತ್ತಿ ಹೇಳಲಾಗಿದೆ.

ಪಂಚೇಂದ್ರಿಯಗಳು ಕಲಿಕೆಗೆ ನೆರವಾಗುವ ಶೇಕಡಾವಾರು ಪ್ರಮಾಣ ಈ ಕೆಳಗಿನಂತಿದೆ.

1. ನಾಲಿಗೆ (ರುಚಿ) ಇಂದ್ರಿಯದಿಂದ ಶೇ. 1.00 ರಷ್ಟು.
2. ಸ್ಪಶೇಂದ್ರಿಯದಿಂದ ಶೇ. 1.5 ರಷ್ಟು.
3. ಮೂಗು ವಾಸನೆಯಿಂದ ಶೇ. 3.00 ರಷ್ಟು.
4. ಕಿವಿ (ಶ್ರವಣೇಂದ್ರಿಯ)ಯಿಂದ ಶೇ. 11.00 ರಷ್ಟು.
5. ನೇತ್ರ ಪಂಚೇಂದ್ರಿಯಗಳಿಂದ ಶೇ. 83.00 ರಷ್ಟು ಜ್ಞಾನಗಳಿಕೆ ಸಾಧ್ಯವೆಂಬ ಅಂಶ ಇತ್ತೀಚಿನ ಸಂಶೋಧನೆಗಳಿಂದ ವ್ಯಕ್ತವಾಗಿದೆ.

ಇದರ ಪರಿಣಾಮದಿಂದಾಗಿ ದೃಷ್ಟಿ, ಅಥವಾ ನೇತ್ರ ಇಂದ್ರಿಯದಿಂದ ಹೆಚ್ಚು ಜ್ಞಾನಗಳಿಕೆ ಮತ್ತು ಕಲಿಕೆ ಸಾಧ್ಯವೆಂಬುದು ವ್ಯಕ್ತವಾಗುವುದು. ಅಲ್ಲದೆ ನೇತ್ರಗಳು ಪ್ರತ್ಯಕ್ಷಾನುಭವ ಒದಗಿಸುತ್ತವೆ.

ಜ್ಞಾನಗಳಿಕೆಯ ಕ್ರಿಯೆಯಲ್ಲಿ ಜ್ಞಾನೇಂದ್ರಿಯಗಳ ಜೊತೆಗೆ ಮೆದುಳೂ ಸಹ ಪ್ರಮುಖ ಅಂಗವಾಗಿದೆ. ಜ್ಞಾನೇಂದ್ರಿಯಗಳ ಅರಿವಿನಿಂದ, ವಸ್ತುಗಳ ಆಕಾರ, ಗಾತ್ರ, ಸ್ವರೂಪ, ಸ್ವಭಾವ, ಭೌತಿಕ ಸ್ಥಿತಿಗತಿಗಳು, ಬಣ್ಣ ಇತ್ಯಾದಿ ಭೌತಿಕ ಲಕ್ಷಣಗಳ ಅರಿವು ಮತ್ತು ಕಲ್ಪನೆ ಮೂಡಲು ದೃಶ್ಯದೊಂದಿಗೆ ಮಾನಸಿಕ ಕಲ್ಪನೆ ರೂಪುಗೊಳ್ಳಲು ಮೆದುಳು ಆರನೆಯ ಇಂದ್ರಿಯವಾಗಿ ವರ್ತಿಸುವುದೆಂದೂ ಹಾಗೂ ದೃಶ್ಯ ಮತ್ತು ಕಲ್ಪನೆ ರೂಪಿಸುವ ಕಾರ್ಯದಲ್ಲಿ ಸಂಬಂಧ ಕಲ್ಪಿಸುವುದು ಅಲ್ಲದೆ ಸ್ಪಷ್ಟ ಕಲ್ಪನೆಗಳು ಅಚ್ಚೊತ್ತಿದಂತೆ ಮಾನವನ ಮೆದುಳಿನ ಭಾಗದಲ್ಲಿ ಸಂಗ್ರಹವಾಗುತ್ತವೆ.

ಶಿಕ್ಷಣ, ಕಲಿಕೆ, ಆಲೋಚನೆ, ವಿವೇಚನೆ, ವಿಮರ್ಶೆ, ತೀರ್ಮಾನ ಇತ್ಯಾದಿ ಕ್ರಿಯೆಗಳಿಗೆ ಮೆದುಳು ಸೂಕ್ತ ರೀತಿಯಲ್ಲಿ ಪ್ರಕ್ರಿಯಿಸಿ, ಸಮರ್ಪಕ ನಿರ್ಧಾರ ಕೈಗೊಳ್ಳಲು ನೆರವಾಗುವುದು. ಆದುದರಿಂದ ಮೆದುಳೂ ಸಹ ಮಾನವನ ಇಂದ್ರಿಯಗಳಲ್ಲಿ ಪ್ರಮುಖ ಇಂದ್ರಿಯ. ಮೆದುಳಿನ ಸೂಕ್ತ





ತರಬೇತಿಗಾಗಿಯೂ ಸಹ ಶಿಕ್ಷಣ ಕ್ರಿಯೆ ಮತ್ತು ಕಲಿಕೆಗೆ ನೆರವಾಗುವುದು. ದೇಹದ ಬೆಳವಣಿಗೆ ಮತ್ತು ಮಾನಸಿಕ ಬೆಳವಣಿಗೆಗಳು, ಶಿಕ್ಷಣದ ಗುರಿಗಳಲ್ಲಿ ಸೇರಿವೆ. ಈ ಎರಡೂ ಸಹ ಒಂದನ್ನೊಂದು ಅವಲಂಬಿಸಿವೆ. ಆದುದರಿಂದ ದೈಹಿಕ ಬೆಳವಣಿಗೆಗಾಗಿ ಶಾರೀರಿಕ ಶಿಕ್ಷಣ, ವ್ಯಾಯಾಮ ಚಟುವಟಿಕೆಗಳು, ಯೋಗಾಭ್ಯಾಸ ಇತ್ಯಾದಿಗಳು ಪ್ರಮುಖವಾಗಿ ಅಗತ್ಯವಾಗಿವೆ. ಅಂತೆಯೇ ಮಾನಸಿಕ ಬೆಳವಣಿಗೆಗೆ ಶಿಕ್ಷಣ ಕ್ರಮ, ವಿಧಾನಗಳು ಅನಿವಾರ್ಯವೆನಿಸಬಹುದು. ನಮ್ಮ ಇಂದ್ರಿಯಗಳ ತರಬೇತಿಯ ಜೊತೆಗೆ ಮಾನಸಿಕ ಬೆಳವಣಿಗೆಗೆ ನೆರವಾಗುವ ಮೆದುಳಿನ ಕಾರ್ಯ ವಿಧಾನವನ್ನು ಚುರುಕುಗೊಳಿಸಿ ಜ್ಞಾಪಕ ಶಕ್ತಿಯನ್ನು ಹೆಚ್ಚಿಸಿಕೊಳ್ಳಬಹುದಲ್ಲದೆ ಮಾನಸಿಕ ಕ್ರಿಯೆಗಳಾದ ಆಲೋಚನೆ, ವಿವೇಚನೆ, ವಿಮರ್ಶೆ ಇತ್ಯಾದಿ ಕ್ರಿಯೆಗಳನ್ನು ಚುರುಕುಗೊಳಿಸಬಹುದು.

ಶಿಕ್ಷಣವೆಂದರೆ, ದೈಹಿಕ, ಮಾನಸಿಕ, ಆಧ್ಯಾತ್ಮಿಕ, ನೈತಿಕ, ಸಾಮಾಜಿಕ, ಭಾವನಾತ್ಮಕ ಬೆಳವಣಿಗೆ ಮತ್ತು ವಿಕಾಸ. ಶಿಕ್ಷಣದ ಪ್ರಕ್ರಿಯೆಯಲ್ಲಿ ಮೆದುಳು ಸ್ಮರಿಸುವ, ಗುರ್ತಿಸುವ, ನೆನಪಿಗೆ ತರುವ, ಪತ್ತೆ ಹಚ್ಚುವ, ಸಂಬಂಧ ಕಲ್ಪಿಸುವ, ನೆನಪಿನಲ್ಲಿಟ್ಟುಕೊಂಡು ಪ್ರಕ್ರಿಯಿಸುವ ಕೆಲಸ ನಿರ್ವಹಿಸುವಲ್ಲಿ ಯಶಸ್ವಿಯಾಗಿ ವರ್ತಿಸುವುದು. ಈ ಎಲ್ಲಾ ಕ್ರಿಯೆಗಳು ಮೆದುಳಿನ ಒಂದು ಕೇಂದ್ರ ಬಿಂದುವಿನಲ್ಲಿ ಜರುಗುತ್ತವೆ. ಇದಕ್ಕಾಗಿ ಅರ್ಥಪೂರ್ಣ ಹಾಗೂ ಉದ್ದೇಶಿತ ಶ್ರವಣ ಅಗತ್ಯ (Meaningful reception). ಸ್ಮರಣಶಕ್ತಿ, ಜ್ಞಾಪಕ ಶಕ್ತಿಗಳು. ಸೂಕ್ತ ರೀತಿಯಲ್ಲಿ ಚುರುಕುಗೊಳ್ಳುವಂತೆ ನೆರವಾಗಲು ಈ ಕೆಳಗಿನಂತೆ ಅಭ್ಯಾಸ ಕೈಗೊಳ್ಳುವುದು ಅಗತ್ಯ. ಮೆದುಳಿನ ಪ್ರಮುಖ ಭಾಗಗಳೆಂದರೆ, ದೃಶ್ಯ, ಸಂಕೇತ, ಮಾಹಿತಿಗಳನ್ನು ಸ್ವೀಕರಿಸುವ ಕೇಂದ್ರ ವಿಭಾಗ, ಅಲ್ಪಕಾಲಾವಧಿ ಸ್ಮರಣೆ ಘಟಕ, ಹಾಗೂ ದೀರ್ಘ ಕಾಲಾವಧಿ ಸ್ಮರಣಾಘಟಕ.

ನಾವು ನೋಡಿದ ಎಲ್ಲಾ ಅಂಶಗಳನ್ನು ನೆನಪಿನಲ್ಲಿಟ್ಟುಕೊಳ್ಳಲು ಸಾಧ್ಯವಿಲ್ಲ. ಹಾಗೆಯೇ ಅಗತ್ಯವಾದ ಅಂಶಗಳನ್ನು ನೆನಪಿನಲ್ಲಿಟ್ಟು ಕೊಳ್ಳದಿರಲೂ ಸಾಧ್ಯವಿಲ್ಲ. ಹಲವು ಹತ್ತಾರು ವಿಷಯಗಳು ನಮ್ಮಿಂದ ಹೇಗೆ ಮರೆಯಾಗುತ್ತವೆ? ಕೇವಲ ಕೆಲವು ಅಗತ್ಯ ವಿಷಯ, ಮಾಹಿತಿಗಳು, ಘಟನೆಗಳು ಮಾತ್ರ ನೆನಪಿನಲ್ಲಿ ಚಿರಕಾಲ ಉಳಿಯಲು ಸಾಧ್ಯ ! ಈ ವಿಷಯಗಳ ಅರಿವಿಗೆ ಬಹುಶಃ ಈ ನಿಯಮಗಳು ಸಮರ್ಪಕವೆನಿಸುತ್ತವೆ. ನಾವು ನೋಡಿದ ಹಲವು ವಿಷಯಗಳನ್ನು ಅನಿವಾರ್ಯವಾಗಿ ನೆನಪಿನಲ್ಲಿಟ್ಟುಕೊಳ್ಳಲೇ ಬೇಕಾಗುವುದು. ಈ ಕ್ರಿಯೆಯಿಂದಲೇ ಮಾನವನ ಮಾನಸಿಕ ಒತ್ತಡ ಸರಿತೂಗಿಸಲ್ಪಡುವುದು.

ಮಾನವನ ಮೆದುಳಿನಲ್ಲಿ ಜರುಗುವ ಪರಿಕಲ್ಪನೆಯ ಕ್ರಿಯೆಯನ್ನು ಹೀಗೆ ಸರಳವಾಗಿ ನಿರೂಪಿಸಬಹುದು. ಭಾವಗ್ರಹಣ ಕ್ಕೊಳಗಾದ ಎಲ್ಲಾ ದೃಶ್ಯಗಳು, ಅಂಶಗಳು, ವಸ್ತುಗಳು, ಮಾಹಿತಿಗಳು, ಶೋಧನೆ, ಆಯ್ಕೆ ಮತ್ತು ಕೈ ಬಿಡುವ ಕ್ರಮ (Filtration, selection and elimination), ವ್ಯವಧಾನದಿಂದ ಶೋಧನಾಕ್ರಿಯೆ ಆಯ್ಕೆ ಮತ್ತು ಜೆಗೆಯುವ ಕ್ರಮದಿಂದ ಹಲವಾರು ವಿಷಯಗಳು ಅದೃಶ್ಯವಾಗುವುವು. ನರಸಂದೇಶಗಳು, ಜ್ಞಾನವಾಹಿನಿಗಳಿಂದ ಮೆದುಳಿಗೆ ಕಳುಹಿಸುವ ಸಂದೇಶಗಳು ಒಂದು ಪ್ರಮುಖ ಕೇಂದ್ರ ಬಿಂದುವಿನಲ್ಲಿ ಸ್ವೀಕೃತವಾಗಿ ನೊಂದಾಯಿಸಲ್ಪಡುತ್ತವೆ. ಹೀಗೆ ಕ್ರೋಢೀಕೃತವಾದ ಎಲ್ಲಾ ಸಂದೇಶಗಳೂ ಮೆದುಳಿನ ಆ ಭಾಗದಲ್ಲಿ ಒಂದು ಸೆಕೆಂಡಿನ ಭಾಗದಷ್ಟು ವೇಳೆಯಲ್ಲಿ ಮಾತ್ರ ಉಳಿಯುತ್ತವೆ. ಈ ಸಂದೇಶಗಳು ಮೆದುಳಿನ ಅಲ್ಪಕಾಲಾವಧಿ ಸ್ಮರಣಾ ಘಟಕದಲ್ಲಿ ಉಳಿಯಲು ಪುನ1 ಪುನಃ ಪುನರಾವರ್ತಿಸಿದರೆ (Relea....) ಅಲ್ಪಕಾಲಾವಧಿ ಸ್ಮರಣಾ ಘಟಕದಲ್ಲಿ ಉಳಿಯುತ್ತವೆ. ಸಂದೇಶಗಳು ದೀರ್ಘಕಾಲದವರೆಗೆ ನೆನಪಿನಲ್ಲಿ ಉಳಿಯಬೇಕಾದಲ್ಲಿ, ದೀರ್ಘಕಾಲಾವಧಿ ಸ್ಮರಣಾ ಘಟಕಕ್ಕೆ ವರ್ಗಾಯಿಸಿ ನಂತರ ತಕ್ಷಣ ಸ್ಮರಣೆಗೆ ನಿಲುಕುವಂತಾಗಲು ಅನುಭವ, ಪ್ರತ್ಯಕ್ಷಾನುಭವ, ಸಂದೇಶಗಳು ಇತ್ಯಾದಿಗಳನ್ನು ಕ್ರಮವಾಗಿ ಜೋಡಿಸಿ, ಸಣ್ಣಸಣ್ಣ ತುಣುಕುಗಳನ್ನು ಒಟ್ಟುಗೂಡಿಸಿ, ಸಂಬಂಧಿಸಿದ ವಸ್ತುಗಳೊಂದಿಗೆ ಸಂಬಂಧ ಕಲ್ಪಿಸಿ, ಸಂದೇಶೀಕರಿಸಿ ದೀರ್ಘಕಾಲ ಸ್ಮರಣೆಗೆ ಉಳಿಯುವಂತೆ ಮಾಡಬೇಕಾಗುವುದು. ಈ ರೀತಿ ಅಲ್ಪ ಕಾಲಾವಧಿ ಸ್ಮರಣ ಪೆಟ್ಟಿಗೆಯಿಂದ ದೀರ್ಘಕಾಲಾವಧಿ ವಿಧಾನವನ್ನು ಅನುಸರಿಸಬೇಕಾಗುವುದು. ಈ ಕ್ರಿಯೆಯಲ್ಲಿ ವಾಚನ ಅಂಶಗಳನ್ನು ದೃಶ್ಯ, ದೃಶ್ಯಗಳನ್ನು ವಾಚನ ವಿಧಾನವಾಗಿ ವರ್ಗಾಯಿಸುವ ವಿಧಾನದಲ್ಲಿ ಜರುಗುವುದು. ಈ ಎಲ್ಲಾ ಹಂತಗಳಿಂದ ದೀರ್ಘಕಾಲ ಉಳಿಯಬೇಕಾದ ಸಂದೇಶ, ಅಂಕ, ಮಾಹಿತಿ, ದೀರ್ಘಕಾಲಾವಧಿ ಸ್ಮರಣೆಯ ಭದ್ರ ಪೆಟ್ಟಿಗೆಯಲ್ಲಿ ಸಂಗ್ರಹವಾಗುವಂತೆ ಮಾಡಿದರೆ ಅಗತ್ಯ ಬಂದಾಗ ಪುನರ್ ಬಳಕೆಗೆ ತೆಗೆಯಬಹುದು. ಈ ವಿಧಾನವನ್ನು ಮಾಹಿತಿ ಸಂಸ್ಕರಣ ಸಿದ್ಧಾಂತವೆನ್ನುವರು. ಸಂದೇಶ ಸ್ವೀಕೃತಿ - ಮಾಹಿತಿ ಸಂಸ್ಕರಣೆ (ನೊಂದಣಿ) - ಉಳಿಸಿಕೊಂಡು ಪುನರ್ ಬಳಕೆಗೆ ಸಂಗ್ರಹವಾಗುವಂತೆ ಮಾಡುವುದು.

ಆಧುನಿಕ ಕಂಪ್ಯೂಟರ್ ರಚನೆ ಮತ್ತು ಕಾರ್ಯಗಳು ಮಾನವನ ಮೆದುಳಿನ ಕ್ರಿಯೆ ಅನ್ವಯವಾಗಿ ರಚನೆಯಾಗಿವೆ. ಕಂಪ್ಯೂಟರ್‌ಗಳ ಕಾರ್ಯವಿಧಾನವನ್ನು ಹೋಲಿಸಿದರೆ, ಮೆದುಳಿನ ಕ್ರಿಯೆಗಳಿಗಿಂತ ಸುದೀರ್ಘ ಹಾಗೂ ತ್ವರಿತ ಕಾಲಾವಧಿಯ ಕ್ರಿಯೆಗಳನ್ನು ಜರುಗಿಸುವುದು. ಕಂಪ್ಯೂಟರ್ ಕೇವಲ ತಾನೇ ಕೆಲವು ಮಾಹಿತಿಗಳನ್ನು ಒದಗಿಸಲಾರದು. ಆದರೆ ಅಗತ್ಯ ಮಾಹಿತಿಗಳನ್ನು ಒದಗಿಸಿ ಸಂಗ್ರಹಿಸಿರಬೇಕು. ಅಧಿಕ ಪ್ರಮಾಣದ ಮಾಹಿತಿಗಳನ್ನು ಕಂಪ್ಯೂಟರ್ ತನ್ನಲ್ಲಿ ಅಡಗಿಸಿಕೊಳ್ಳ ಬಲ್ಲದು. ಬೇಕೆಂದಾಗ ತಕ್ಷಣ ಆ ಮಾಹಿತಿಯನ್ನು ತೆಗೆಯಬಹುದು. ಕಂಪ್ಯೂಟರ್‌ಗಳು ಮೆದುಳಿನ ಕ್ರಿಯೆಗಳಂತೆ ಲೆಕ್ಕಾಚಾರ ಕ್ರಿಯೆಗಳನ್ನು ಲೀಲಾಜಾಲವಾಗಿ ಸೆಕೆಂಡಿನ ಭಾಗಗಳಲ್ಲಿ ಮಾಡಿ ಪೂರೈಸಿ ಅಂತಿಮ ಫಲಿತಾಂಶ ನೀಡುತ್ತವೆ. ಹೀಗೆಯೇ ಮೆದುಳಿನಲ್ಲಿಯೂ ಅಗತ್ಯ ಮಾಹಿತಿಗಳನ್ನು ಸಂಸ್ಕರಿಸಿ ದೀರ್ಘಕಾಲಾವಧಿ ಸ್ಮರಣಾ ಘಟಕದಲ್ಲಿ ಸಂಗ್ರಹಿಸಿಕೊಳ್ಳಲು ಅಭ್ಯಾಸ ಮಾಡಬೇಕು. ನಮ್ಮ ಮೆದುಳಿನಲ್ಲಿ ಸಂಗ್ರಹಿಸಿಲ್ಲದ ಅಥವಾ ಪರಿಪೂರ್ಣವಾಗಿಲ್ಲದ ಮಾಹಿತಿ ಕೊರತೆಯಾದಾಗ ನಮ್ಮ ಮೆದುಳೂ ಸಹ ನಮ್ಮ ಕ್ರಿಯೆಗೆ ನಿಷ್ಕ್ರಿಯಿಸುವುದು. ಅನಗತ್ಯ ಮಾಹಿತಿಗಳಿಂದ ಮೆದುಳಿಗೆ ಹೆಚ್ಚಿನ ಒತ್ತಡವೇರುವುದು. ಆರೋಗ್ಯದ ದೃಷ್ಟಿಯಿಂದ ಒಳ್ಳೆಯದಲ್ಲ.

ತನ್ನಿಚ್ಚೆಯ ನುಡಿದಡೆ ಮೆಚ್ಚುವುದೀ
ಮನವು; ಇದಿರಿಚ್ಚೆಯ ನುಡಿದಡೆ
ಮೆಚ್ಚದೀ ಮನವು; ಕೂಡಲಸಂಗನ
ಶರಣರ ನಚ್ಚದ ಮೆಚ್ಚದ ಮನವ
ಕಿಚ್ಚಿನೊಳಗಿಕ್ಕು.

# ಸಿದ್ಧಗಂಗೆಯಲ್ಲಿ ಸಂಸ್ಕೃತೋತ್ಸವ

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಆಶ್ರಯದಲ್ಲಿ 24, 25ರಂದು ಡಿಸೆಂಬರ್ 81ನೆಯ ಸಂಸ್ಕೃತ ದಿನೋತ್ಸವವು ಜರುಗಿತು. ಉತ್ಸವದ ಅಂಗವಾಗಿ ಈ ಎರಡು ದಿನಗಳು ವಿವಿಧ ಬಗೆಯ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಳ್ಳಲಾಯಿತು. ದಿನಾಂಕ 24ರ ಬುಧವಾರ ಪ್ರಾತಃಕಾಲದ ಪ್ರಭಾತ ಭೇರಿಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಸಂಸ್ಕೃತ ಧ್ವಜಾರೋಹಣವನ್ನು ಶ್ರೀ ಕ್ಷೇತ್ರದ ಕಿರಿಯ ಶ್ರೀಗಳು ನೆರವೇರಿಸಿದರು. ನಂತರ ವಿದ್ಯಾರ್ಥಿಗಳಿಂದ ಪಥಸಂಚಲನವು ನಡೆಯಿತು. ಉತ್ಸವದ ಸಂದರ್ಭದಲ್ಲಿ ವ್ಯವಸ್ಥೆಗೊಳಿಸಲಾಗಿದ್ದ ಬೋಧಪ್ರದವಾದ "ಸಂಸ್ಕೃತ ಸಂಸ್ಕೃತಿ" ಪ್ರದರ್ಶನವನ್ನು ಬೆಂಗಳೂರು ವಿಭಾಗದ ವಿಷಯ ಪರಿವೀಕ್ಷಕರಾದ ವಿದ್ವಾನ್ ಕೆ. ಎಸ್. ಪರಮೇಶ್ವರಯ್ಯ ಅವರು ಉದ್ಘಾಟಿಸಿದರು. ನಂತರ ಬೆಳಿಗ್ಗೆ 10-00 ಘಂಟೆಯಿಂದ ಶಾಸ್ತ್ರ ವಿಚಾರ ಗೋಷ್ಠಿಯು ನಡೆಯಿತು. ಗೋಷ್ಠಿಯಲ್ಲಿ ಅಲಂಕಾರ, ವ್ಯಾಕರಣ, ನ್ಯಾಯ ಮತ್ತು ವೇದಾಂತ ಶಾಸ್ತ್ರಗಳಲ್ಲಿ ಪರಿಣಿತ ವಿದ್ವಾಂಸರಿಂದ ಶಾಸ್ತ್ರಚಿಂತನೆಯನ್ನು ನಡೆಸಲಾಯಿತು. ಈ ಗೋಷ್ಠಿಯ ದಿವ್ಯನೇತೃತ್ವವನ್ನು ಶ್ರೀ ಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ವಹಿಸಿದ್ದರು.

ದಿನಾಂಕ 25-12-97 ಗುರುವಾರ ಉತ್ಸವದ ಅಂಗವಾಗಿ ಸಾರ್ವಜನಿಕ ಸಮಾರಂಭವನ್ನು ವ್ಯವಸ್ಥೆಗೊಳಿಸಲಾಗಿತ್ತು. ಸಮಾರಂಭ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ದಯಪಾಲಿಸಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಅಲ್ಪಸಂಖ್ಯಾತ ಭಾಷೆಗಳ ನಿರ್ದೇಶಕರಾದ ಸನ್ಮಾನ್ಯ ಶ್ರೀ ಬಿ. ಪಿ. ತಿಪ್ಪಯ್ಯನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶಿಕ್ಷಣ ಇಲಾಖೆಯ ಅಧೀನ ಕಾರ್ಯದರ್ಶಿಗಳಾದ ಶ್ರೀ ಹೆಚ್. ಹನುಮಂತಪ್ಪನವರು ಆಗಮಿಸಿದ್ದರು. ಸಮಾರೋಪ ಭಾಷಣವನ್ನು ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆಯ ಪೋಲೀಸ್ ಮಹಾನಿರೀಕ್ಷಕರಾದ ಸನ್ಮಾನ್ಯ ಶ್ರೀ ಡಿ. ಎನ್. ಮುನಿಕೃಷ್ಣ ಅವರು ನಡೆಸಿಕೊಟ್ಟರು. ಶ್ರೀಯುತರು ತಮ್ಮ ಸಮಾರೋಪ ಭಾಷಣದಲ್ಲಿ ಸಂಸ್ಕೃತ ಭಾಷೆಯ ಮಹತ್ವವನ್ನು ಮತ್ತು ಪ್ರಯೋಜನವನ್ನು ಕುರಿತು ಸುಲಲಿತವಾದ ಮಾತುಗಳಲ್ಲಿ ತಿಳಿಸಿದರು. ಪರಮಪೂಜ್ಯ ಶ್ರೀ ಶ್ರೀಗಳವರು ಕೊಟ್ಟಂತಹ ಭಾಷೆ. ಆ ಭಾಷೆಯಲ್ಲಿ ನಡೆದಿರುವ ಸಂಶೋಧನೆಗಳು ಯಾವ ವೈಜ್ಞಾನಿಕ ಸಂಶೋಧನೆಗಳಿಗೂ ಮಿಗಿಲಾದುದು. ಪಾಣಿನಿಯ ಅಷ್ಟಾಧ್ಯಾಯಿ ಶಬ್ದಪ್ರಪಂಚದ ಮಹತ್ ಸಾಧನೆ. ಅಮರಸಿಂಹನ ಅಮರಕೋಶ ಒಂದು ಸಂಚಾರಿ ವಿಶ್ವಕೋಶ, ಮುಂತಾಗಿ ಆಶೀರ್ವಚನದಲ್ಲಿ ಅಪ್ಪಣೆ ಕೊಡಿಸಿದರು.



ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಪಿ. ಎನ್. ಚಂದ್ರಶೇಖರಯ್ಯ ಅವರು ಸ್ವಾಗತಿಸಿದರು. ಪ್ರಾಧ್ಯಾಪಕರಾದ ಶ್ರೀ ಡಿ.ಬಸವರಾಜುರವರು ವಂದಿಸಿದರು. ಉಪ-ಪ್ರಾಧ್ಯಾಪಕರಾದ ಶ್ರೀ ಕೆ. ಬಸವರಾಜುರವರು ಕಾರ್ಯಕ್ರಮವನ್ನು ನಿರೂಪಿಸಿದರು.

### ವಜ್ರ ಮಹೋತ್ಸವ ನೆನಪಿನ ಕ್ರೀಡಾಕೂಟ

ಶ್ರೀ ಸಿದ್ಧಗಂಗಾ ಮಠದ ವಜ್ರಮಹೋತ್ಸವ ಕ್ರೀಡಾಕೂಟ ಸಮಿತಿಯ ಆಶ್ರಯದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ವಜ್ರಮಹೋತ್ಸವ ನೆನಪಿನ ಕ್ರೀಡಾಕೂಟ ಶ್ರೀ ಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ 1997ನೇ ಡಿಸೆಂಬರ್ 27ರಿಂದ 28ರವರೆಗೆ ವೈವಿಧ್ಯಮಯ ಚಟುವಟಿಕೆಗಳೊಂದಿಗೆ ನಡೆಯಿತು.

ದಿ. 27-12-97ನೇ ಶನಿವಾರ ಕ್ರೀಡಾಕೂಟದ ಉದ್ಘಾಟನಾ ಸಮಾರಂಭದ ದಿವ್ಯನೇತೃತ್ವವಹಿಸಿದ್ದ ಕಿರಿಯ ಶ್ರೀಗಳು ಆಶೀರ್ವಚನ ನೀಡುತ್ತಾ "ಆರೋಗ್ಯದಿಂದ ಕೂಡಿದ ದೇಹ ಆತ್ಮನ ಅರಮನೆ. ಅನಾರೋಗ್ಯದಿಂದ ಕೂಡಿದ ದೇಹ ಆತ್ಮನ ಸೆರಮನೆ. ಸದ್ರತ ಶರೀರದಲ್ಲಿ





ಸದೃಡ ಮನಸ್ಸು ಇರುತ್ತದೆ. ಆದ್ದರಿಂದ ಮಕ್ಕಳ ಬೌದ್ಧಿಕ ಬೆಳವಣಿಗೆಯ ಜೊತೆಗೆ ಶಾರೀರಿಕ ಬೆಳವಣಿಗೆಯಾಗಲು ಈ ರೀತಿಯ ಕ್ರೀಡಾಕೂಟಗಳು ಸಹಕಾರಿಯಾಗಿವೆ. ಎಲ್ಲರು ಹೆಚ್ಚಿನ ರೀತಿಯಲ್ಲಿ ಭಾಗವಹಿಸಿ ಉತ್ತಮ ಪ್ರಶಸ್ತಿಗಳನ್ನು ಗಳಿಸುವುದರ ಮೂಲಕ ಎಲ್ಲಾ ಕ್ರೀಡಾ ಪಟುಗಳಿಗೂ ಉತ್ತಮ ಯಶಸ್ಸು ಸಿಗುವಂತಾಗಲಿ" ಎಂದು ಆಶಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಸಿದ್ಧಗಂಗಾ ತಾಂತ್ರಿಕ ವಿದ್ಯಾಲಯದ ಪ್ರಾಂಶುಪಾಲರಾದ ಡಾ. ಶ್ರೀ ಎಂ. ಎನ್. ಚನ್ನಬಸಪ್ಪನವರು ವಹಿಸಿದ್ದರು. ಕ್ರೀಡಾ ಕೂಟದ ಉದ್ಘಾಟನೆಯನ್ನು ಶ್ರೀ ಸಿದ್ಧಗಂಗಾ ಪ್ರಥಮ ದರ್ಜೆ ಬಾಲಕರ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಸಿ. ಆರ್. ನಾಗರಾಜು ನೆರವೇರಿಸಿದರು. ತುಮಕೂರಿನ ವಾಸವಿ ವಿದ್ಯಾಪೀಠದ ಅಧ್ಯಕ್ಷರಾದ ಶ್ರೀ ಸಿ. ಎ. ಸೋಮೇಶ್ವರ ಗುಪ್ತಾರವರು ಧ್ವಜಾರೋಹಣ ಮಾಡಿದರು. ನಂತರ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ವಿವಿಧ ಶಾಲೆಗಳಿಂದ ಆಗಮಿಸಿದ್ದ ಕ್ರೀಡಾಪಟುಗಳಿಂದ ವಂದನೆ ಸ್ವೀಕರಿದರು.

ತುಮಕೂರು ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರಾದ ಶ್ರೀ ವೆಂಕಟಸುಬ್ಬಯ್ಯನವರು ಕ್ರೀಡಾಪಟುಗಳಿಂದ ಕ್ರೀಡಾ ಜ್ಯೋತಿ ಸ್ವೀಕರಿಸಿದರು.

ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ. ಕೆ. ನಂಜುಂಡಪ್ಪ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾನೂನು ಸಲಹೆಗಾರರಾದ ಶ್ರೀ ಕೆ. ಎಸ್. ರಾಜಶೇಖರ್ ಹಾಗೂ ತುಮಕೂರು ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಟಿ. ಚಂದ್ರಯ್ಯನವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ದಿ 28ರ ಭಾನುವಾರ ಶ್ರೀ ಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಸಾನಿಧ್ಯದಲ್ಲಿ ಮುಕ್ತಾಯ ಸಮಾರಂಭ ನೆರವೇರಿತು.

ಸಮಾರಂಭದ ದಿವ್ಯ ಸಾನಿಧ್ಯವಹಿಸಿದ್ದ ಕಿರಿಯ ಶ್ರೀಗಳು ಆಶೀರ್ವಚನ ನೀಡುತ್ತಾ ಈ "ಕ್ರೀಡಾಕೂಟ" ಅರ್ಥಪೂರ್ಣವಾಗಿ ನಡೆದಿದೆ. ದೇಶಪ್ರೇಮ, ನಿಷ್ಠಾತ್ಮಕ ಸೇವೆ, ಕ್ರೀಡಾಮನೋಭಾವನೆ, ಬದುಕಿನಲ್ಲಿ ಶಿಸ್ತು ಅಲ್ಲದೆ ನಾಯಕತ್ವದ ಗುಣಗಳನ್ನು ಬೆಳಸಿಕೊಳ್ಳಲು ಈ ರೀತಿಯ ಸ್ಪರ್ಧಾತ್ಮಕ ಕ್ರೀಡೆಗಳು ಸಹಕಾರಿಯಾಗಿವೆ. ಮುಂದಿನ ದಿನಗಳಲ್ಲಿ ಇನ್ನು ಉತ್ತಮ ಅಭಿವೃದ್ಧಿಯನ್ನು ಸಾಧಿಸುವಂತಾಗಲಿ ಎಂದು ಆಶಿಸಿದರು.

ವಿವಿಧ ಸ್ಪರ್ಧೆಗಳಲ್ಲಿ ವಿಜೇತರಾದ ಕ್ರೀಡಾಪಟುಗಳಿಗೆ ತುಮಕೂರಿನ ಹೆಚ್.ಎಂ.ಟಿ.ಯ ರಾಷ್ಟ್ರಮಟ್ಟದ ಕ್ರೀಡಾಪಟು ಶ್ರೀ ಎಂ. ಸಿ. ಪ್ರಕಾಶ್ ಬಹುಮಾನವನ್ನು ವಿತರಿಸಿದರು.

ತುಮಕೂರು ಶ್ರೀ ಸಿದ್ಧಗಂಗಾ ಬಡಾವಣೆ ಶಾಲೆಯ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ವ್ಯವಸ್ಥಾಪಕರಾದ ಶ್ರೀ ಎ. ಸುಧಾಕರ್ ಹಾಗೂಬೆಂಗಳೂರಿನ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಯ ಉಪನಿರ್ದೇಶಕರಾದ ಶ್ರೀ ಎ. ಎಂ. ಮಹಾದೇವಪ್ಪನವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಶ್ರೀಜಿ. ಗವಿಸಿದ್ಧಯ್ಯನವರು ಸ್ವಾಗತಿಸಿದರು. ಶ್ರೀ ಬಿ.ಎಸ್. ಬಸವರಾಜು ವಂದಿಸಿದರು. ಶ್ರೀ ಪಿ. ಎಸ್. ನಾಗರಾಜು ಕಾರ್ಯಕ್ರಮವನ್ನು ನಿರೂಪಿಸಿದರು.

### ದೈಹಿಕ ಶಿಕ್ಷಕರ ಪುನಶ್ಚೇತನ ಕಾರ್ಯಾಗಾರ ಸಮಾರಂಭ

ತುಮಕೂರು ತಾಲ್ಲೋಕು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಶ್ರಯಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ 1997 ಡಿಸೆಂಬರ್ 29ರಿಂದ 1998ನೇ ಜನವರಿ 3ರವರೆವಿಗೆ ತುಮಕೂರು ತಾಲ್ಲೂಕುಮಟ್ಟದ ದೈಹಿಕ ಶಿಕ್ಷಕರ ಪುನಶ್ಚೇತನಾ ಕಾರ್ಯಾಗಾರ ತುಮಕೂರು ಸಾರ್ವಜನಿಕ ಶಿಕ್ಷಣ ಇಲಾಖಾವತಿಯಿಂದ ಶ್ರೀ ಕ್ಷೇತ್ರದಲ್ಲಿ ನೆರವೇರಿತು.

ಸಮಾರಂಭದ ದಿವ್ಯ ಸಾನಿಧ್ಯವನ್ನು ಶ್ರೀ ಕ್ಷೇತ್ರದ ಕಿರಿಯ ಶ್ರೀಗಳವರು ವಹಿಸಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ತಾಲ್ಲೋಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದಂತಹ ಶ್ರೀ ಟಿ. ಚಂದ್ರಯ್ಯನವರು ವಹಿಸಿದ್ದರು. ತುಮಕೂರು ತಾಲ್ಲೋಕು ಸಹಾಯಕ ಶಿಕ್ಷಣಾಧಿಕಾರಿಗಳು ಸಮಾರಂಭವನ್ನು ಉದ್ಘಾಟಿಸಿದರು.

ವರದಿ : ಕೆ. ಬಿ. ಶಿವಶಂಕರಯ್ಯ

### ವಸ್ತುಪ್ರದರ್ಶನದ ಪೂರ್ವಭಾವಿ ಸಿದ್ಧತಾ ಸಭೆ

ಡಿಸೆಂಬರ್ 14 ರಂದು ಶ್ರೀ ಮಠದಲ್ಲಿ ಹಳೇ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ. ಎನ್. ಚನ್ನಬಸಪ್ಪನವರ ಅಧ್ಯಕ್ಷತೆಯಲ್ಲಿ ವಸ್ತುಪ್ರದರ್ಶನದ ಪೂರ್ವಭಾವಿ ಸಿದ್ಧತಾ ಸಭೆ ನಡೆಯಿತು. ಸಭೆಯಲ್ಲಿ ಮುಂಬರುವ ವಸ್ತುಪ್ರದರ್ಶನವನ್ನು ಹಲವು ಅಗತ್ಯ ಸೂಕ್ತ ಮಾರ್ಪಾಡುಗಳೊಂದಿಗೆ ಪ್ರದರ್ಶಿಸಲು ಅನುಕೂಲವಾಗುವಂತೆ ಜಿಲ್ಲಾ ಅಭಿವೃದ್ಧಿ ಇಲಾಖೆಗಳ ಅಧಿಕಾರಿಗಳ ಸಭೆಯಲ್ಲಿ ಚರ್ಚಿಸಲು ತೀರ್ಮಾನಿಸಲಾಯಿತು.

ಸದ್ಯದಲ್ಲಿಯೇ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣ ಅಧಿಕಾರಿಗಳನ್ನು ಭೇಟಿಯಾಗಿ ಉದ್ದೇಶಿತ ವಿಷಯದ ಬಗ್ಗೆ ವಿಚಾರ ವಿನಿಮಯ ನಡೆಸಲು ತೀರ್ಮಾನಿಸಲಾಯಿತು.

ಇದೇ ಸಂದರ್ಭದಲ್ಲಿ ಸಿದ್ಧಗಂಗಾ ಮಾಸಿಕ ಪತ್ರಿಕೆಯನ್ನು ಉತ್ತಮ ಗುಣಮಟ್ಟದಲ್ಲಿ ಹೊರತರಲು ವಿಚಾರ ವಿನಿಮಯ ನಡೆಸಿ ಪತ್ರಿಕೆಯ ಆಕಾರ, ವಿನ್ಯಾಸ ಹಾಗೂ ಉತ್ತಮ ಕಾಗದವನ್ನು ಬಳಸಿ ಆಫ್‌ಸೆಟ್ ಮುದ್ರಣದಲ್ಲಿ ಮುದ್ರಿಸಲು ತೀರ್ಮಾನಿಸಲಾಯಿತು.

ಶ್ರೀ ಕ್ಷೇತ್ರದಲ್ಲಿ ಜಿಲ್ಲಾ ವಿವಿಧ ಇಲಾಖೆಗಳ ಅಧಿಕಾರಿಗಳ ಸಭೆ

ಪ್ರತಿ ವರ್ಷದಂತೆ ಈ ವರ್ಷವೂ ಸಹ ಶ್ರೀ ಸಿದ್ಧಲಿಂಗೇಶ್ವರ ಜಾತ್ರಾ ಮಹೋತ್ಸವದ ಅಂಗವಾಗಿ ನಡೆಯುವ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದಲ್ಲಿ ಸರ್ಕಾರದ ವಿವಿಧ ಇಲಾಖೆಗಳ ವತಿಯಿಂದ ವ್ಯವಸ್ಥೆಗೊಳಿಸಲಾಗುವ ಮಳಿಗೆಗಳ ಬಗ್ಗೆ ಜಿಲ್ಲಾ ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿ ಶ್ರೀ ಅಜೀಜುಲ್ಲಾಬೇಗ್ ಅವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಪೂರ್ವಸಿದ್ಧತೆಯ ಬಗ್ಗೆ ಚರ್ಚಿಸಲಾಯಿತು.

ವಸ್ತುಪ್ರದರ್ಶನ ಸಮಿತಿಯ ಕಾರ್ಯದರ್ಶಿ ಶ್ರೀ ಬಿ. ಗಂಗಾಧರಯ್ಯ ಅವರು ಶಾಶ್ವತ ಮಳಿಗೆ ನಿರ್ಮಾಣ ಮಾಡುವ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳಲಾಗುವುದೆಂದು ಈ ಸಂದರ್ಭದಲ್ಲಿ ತಿಳಿಸಿದರು.

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ;
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ;
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ;
ಛಲಬೇಕು ಶರಣಂಗೆ ಲಿಂಗಜಂಗಮ ಒಂದೆ ಎಂಬ;
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ;
ಛಲವಿಲ್ಲದವರ ಮೆಚ್ಚ, ಕೂಡಲಸಂಗಮದೇವ.

ಆಯುಷ್ಯ ತೀರಿದಲ್ಲದೆ ಮರಣವಿಲ್ಲ.
ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ.
ಅಂಜಲದೇಕೋ ಲೋಕ ವಿಗರ್ಭಣೆಗೆ?
ಅಂಜಲದೇಕೋ,
ಕೂಡಲಸಂಗಮದೇವಾ ನಿಮ್ಮಾಳಾಗಿ?

-- ಬಸವಣ್ಣ

### ಜನವರಿ

| | | | | | |
|---|---|---|---|---|---|
| ಭಾನು | ✡ | 4 | 11 | 18 | 25 |
| ಸೋಮ | ✡ | 5 | 12 | 19 | 26 |
| ಮಂಗಳ | ✡ | 6 | 13 | 20 | 27 |
| ಬುಧ | ✡ | 7 | 14 | 21 | 28 |
| ಗುರು | 1 | 8 | 15 | 22 | 29 |
| ಶುಕ್ರ | 2 | 9 | 16 | 23 | 30 |
| ಶನಿ | 3 | 10 | 17 | 24 | 31 |

### ಫೆಬ್ರವರಿ

| | | | | | |
|---|---|---|---|---|---|
| ಭಾನು | 1 | 8 | 15 | 22 | ✡ |
| ಸೋಮ | 2 | 9 | 16 | 23 | ✡ |
| ಮಂಗಳ | 3 | 10 | 17 | 24 | ✡ |
| ಬುಧ | 4 | 11 | 18 | 25 | ✡ |
| ಗುರು | 5 | 12 | 19 | 26 | ✡ |
| ಶುಕ್ರ | 6 | 13 | 20 | 27 | ✡ |
| ಶನಿ | 7 | 14 | 21 | 28 | ✡ |

### ಮಾರ್ಚಿ

| | | | | | |
|---|---|---|---|---|---|
| ಭಾನು | 1 | 8 | 15 | 22 | 29 |
| ಸೋಮ | 2 | 9 | 16 | 23 | 30 |
| ಮಂಗಳ | 3 | 10 | 17 | 24 | 31 |
| ಬುಧ | 4 | 11 | 18 | 25 | ✡ |
| ಗುರು | 5 | 12 | 19 | 26 | ✡ |
| ಶುಕ್ರ | 6 | 13 | 20 | 27 | ✡ |
| ಶನಿ | 7 | 14 | 21 | 28 | ✡ |

### ಏಪ್ರಿಲ್

| | | | | | |
|---|---|---|---|---|---|
| ಭಾನು | ✡ | 5 | 12 | 19 | 26 |
| ಸೋಮ | ✡ | 6 | 13 | 20 | 27 |
| ಮಂಗಳ | ✡ | 7 | 14 | 21 | 28 |
| ಬುಧ | 1 | 8 | 15 | 22 | 29 |
| ಗುರು | 2 | 9 | 16 | 23 | 30 |
| ಶುಕ್ರ | 3 | 10 | 17 | 24 | ✡ |
| ಶನಿ | 4 | 11 | 18 | 25 | ✡ |

# ಸಿದ್ಧಗಂಗಾ

# 1998

॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

### ಮೇ

| | | | | | |
|---|---|---|---|---|---|
| ಭಾನು | 31 | 3 | 10 | 17 | 24 |
| ಸೋಮ | ✡ | 4 | 11 | 18 | 25 |
| ಮಂಗಳ | ✡ | 5 | 12 | 19 | 26 |
| ಬುಧ | ✡ | 6 | 13 | 20 | 27 |
| ಗುರು | ✡ | 7 | 14 | 21 | 28 |
| ಶುಕ್ರ | 1 | 8 | 15 | 22 | 29 |
| ಶನಿ | 2 | 9 | 16 | 23 | 30 |

### ಜೂನ್

| | | | | | |
|---|---|---|---|---|---|
| ಭಾನು | ✡ | 7 | 14 | 21 | 28 |
| ಸೋಮ | 1 | 8 | 15 | 22 | 29 |
| ಮಂಗಳ | 2 | 9 | 16 | 23 | 30 |
| ಬುಧ | 3 | 10 | 17 | 24 | ✡ |
| ಗುರು | 4 | 11 | 18 | 25 | ✡ |
| ಶುಕ್ರ | 5 | 12 | 19 | 26 | ✡ |
| ಶನಿ | 6 | 13 | 20 | 27 | ✡ |



### ಜುಲೈ

| | | | | | |
|---|---|---|---|---|---|
| ಭಾನು | ✡ | 5 | 12 | 19 | 26 |
| ಸೋಮ | ✡ | 6 | 13 | 20 | 27 |
| ಮಂಗಳ | ✡ | 7 | 14 | 21 | 28 |
| ಬುಧ | 1 | 8 | 15 | 22 | 29 |
| ಗುರು | 2 | 9 | 16 | 23 | 30 |
| ಶುಕ್ರ | 3 | 10 | 17 | 24 | 31 |
| ಶನಿ | 4 | 11 | 18 | 25 | ✡ |

### ಆಗಸ್ಟ್

| | | | | | |
|---|---|---|---|---|---|
| ಭಾನು | 30 | 2 | 9 | 16 | 23 |
| ಸೋಮ | 31 | 3 | 10 | 17 | 24 |
| ಮಂಗಳ | ✡ | 4 | 11 | 18 | 25 |
| ಬುಧ | ✡ | 5 | 12 | 19 | 26 |
| ಗುರು | ✡ | 6 | 13 | 20 | 27 |
| ಶುಕ್ರ | ✡ | 7 | 14 | 21 | 28 |
| ಶನಿ | 1 | 8 | 15 | 22 | 29 |

### ಸೆಪ್ಟಂಬರ್

| | | | | | |
|---|---|---|---|---|---|
| ಭಾನು | ✡ | 6 | 13 | 20 | 27 |
| ಸೋಮ | ✡ | 7 | 14 | 21 | 28 |
| ಮಂಗಳ | 1 | 8 | 15 | 22 | 29 |
| ಬುಧ | 2 | 9 | 16 | 23 | 30 |
| ಗುರು | 3 | 10 | 17 | 24 | ✡ |
| ಶುಕ್ರ | 4 | 11 | 18 | 25 | ✡ |
| ಶನಿ | 5 | 12 | 19 | 26 | ✡ |

### ಅಕ್ಟೋಬರ್

| | | | | | |
|---|---|---|---|---|---|
| ಭಾನು | ✡ | 4 | 11 | 18 | 25 |
| ಸೋಮ | ✡ | 5 | 12 | 19 | 26 |
| ಮಂಗಳ | ✡ | 6 | 13 | 20 | 27 |
| ಬುಧ | ✡ | 7 | 14 | 21 | 28 |
| ಗುರು | 1 | 8 | 15 | 22 | 29 |
| ಶುಕ್ರ | 2 | 9 | 16 | 23 | 30 |
| ಶನಿ | 3 | 10 | 17 | 24 | 31 |

### ನವಂಬರ್

| | | | | | |
|---|---|---|---|---|---|
| ಭಾನು | 1 | 8 | 15 | 22 | 29 |
| ಸೋಮ | 2 | 9 | 16 | 23 | 30 |
| ಮಂಗಳ | 3 | 10 | 17 | 24 | ✡ |
| ಬುಧ | 4 | 11 | 18 | 25 | ✡ |
| ಗುರು | 5 | 12 | 19 | 26 | ✡ |
| ಶುಕ್ರ | 6 | 13 | 20 | 27 | ✡ |
| ಶನಿ | 7 | 14 | 21 | 28 | ✡ |

### ಡಿಸೆಂಬರ್

| | | | | | |
|---|---|---|---|---|---|
| ಭಾನು | ✡ | 6 | 13 | 20 | 27 |
| ಸೋಮ | ✡ | 7 | 14 | 21 | 28 |
| ಮಂಗಳ | 1 | 8 | 15 | 22 | 29 |
| ಬುಧ | 2 | 9 | 16 | 23 | 30 |
| ಗುರು | 3 | 10 | 17 | 24 | 31 |
| ಶುಕ್ರ | 4 | 11 | 18 | 25 | ✡ |
| ಶನಿ | 5 | 12 | 19 | 26 | ✡ |

Printed at : Geetanjali Printers, Bangalore - 54